# ಮೊಲ್ಲೆಬೊಮ್ಮಯ್ಯಗಳ ಕಾವ್ಯ : ಒಂದು ಅಧ್ಯಯನ

(ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕರು

ಸುಮಂಗಲಾ ಎಸ್. ಮೇಟಿ

ಮಾರ್ಗದರ್ಶಕರು

ಡಾ. ಎಫ್. ಟಿ. ಹಳ್ಳಿಕೇರಿ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ಅಧ್ಯಯನ ವಿಭಾಗ

೨೦೦೮



ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

# ಮೊಲ್ಲೆಬೊಮ್ಮಯ್ಯಗಳ ಕಾವ್ಯ: ಒಂದು ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)




ಸಂಶೋಧಕರು

**ಸುಮಂಗಲಾ ಎಸ್.ಮೇಟಿ**

ಮಾರ್ಗದರ್ಶಕರು

**ಡಾ.ಎಫ್.ಟಿ.ಹಳ್ಳಿಕೇರಿ**

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ಅಧ್ಯಯನ ವಿಭಾಗ



೨೦೦೮







ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**ಮೊಲ್ಲೆಬೊಮ್ಮಯ್ಯಗಳ ಕಾವ್ಯ : ಒಂದು ಅಧ್ಯಯನ** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಸುಮಂಗಲಾ ಎಸ್.ಮೇಟಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಎಫ್.ಟಿ.ಹಳ್ಳಿಕೇರಿ**
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ :

# ಪ್ರಮಾಣ ಪತ್ರ

**ಮೊಲ್ಲೆಬೊಮ್ಮಯ್ಯಗಳ ಕಾವ್ಯ : ಒಂದು ಅಧ್ಯಯನ** ಎಂಬ ಸಂಪ್ರಬಂಧವನ್ನು **ಡಾ.ಎಫ್.ಟಿ.ಹಳ್ಳಿಕೇರಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

SMeti

**ಸುಮಂಗಲಾ ಎಸ್.ಮೇಟಿ**
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ :

## ಕೃತಜ್ಞತೆಗಳು

ವಿಷಯದ ಆಯ್ಕೆ, ಸ್ವರೂಪ ಮತ್ತು ಅಧ್ಯಯನದ ಪ್ರಾರಂಭದಿಂದ ಅಂತ್ಯದವರೆಗೆ ಸೂಕ್ತ ಸಲಹೆಗಳನ್ನು ನಿರಂತರ ಉತ್ತೇಜನ ಮತ್ತು ಪ್ರೋತ್ಸಾಹ ಮಾರ್ಗದರ್ಶನ ನೀಡುವುದರೊಂದಿಗೆ ಸಂಪ್ರಬಂಧ ರೂಪುಗೊಳ್ಳುವಲ್ಲಿ ಮಾರ್ಗದರ್ಶನ ನೀಡಿದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ.ಎಫ್.ಟಿ.ಹಳ್ಳಿಕೇರಿ ಇವರಿಗೆ ನನ್ನ ಕೃತಜ್ಞತೆಗಳು.

ಸಂಶೋಧನೆ ನಡೆಸಲು ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಅಂದಿನ ಕುಲಪತಿಗಳಾದ ಡಾ.ಕೆ.ವಿ.ನಾರಾಯಣರವರಿಗೂ, ಇಂದಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪರವರಿಗೂ ಮತ್ತು ಅಧ್ಯಯನಾಂಗದ ನಿರ್ದೇಶಕರಿಗೂ, ಕನ್ನಡ ಹಸ್ತಪ್ರತಿಶಾಸ್ತ್ರ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಎಸ್.ಅಂಗಡಿಯವರ ಸಲಹೆ, ಸಹಕಾರಕ್ಕೆ ನನ್ನ ಕೃತಜ್ಞತೆಗಳು.

ಅಧ್ಯಯನದ ಸಮಯದಲ್ಲಿ ಸಂಶೋಧನೆಯ ಬಗ್ಗೆ ಇದ್ದ ಅನುಮಾನಗಳನ್ನು ಬಗೆಹರಿಸಿ, ಸೂಕ್ತ ಸಲಹೆಯನ್ನು ನೀಡಿದ ಡಾ.ಕೆ.ರವೀಂದ್ರನಾಥ್, ಡಾ.ಬಿ.ಕೆ.ಹಿರೇಮಠ, ಡಾ.ವೀರಭದ್ರಗೌಡ, ಡಾ.ವೆಂಕಟಗಿರಿ ದಳವಾಯಿ, ಡಾ.ವೀರೇಶ ಬಡಿಗೇರ,ಶ್ರೀಮತಿ ಅನಿತಾ ಬಡಿಗೇರ, ಡಾ.ಚನ್ನವೀರಪ್ಪ , ಸಿದ್ದರಾಮ ಉಪ್ಪಿನ, ಜಗದೇವರಾವ್ ದೇಶಮುಖ್, ಡಾ.ರಹಮತ್ ತರೀಕೆರೆ, ಡಾ.ಕೆ.ಎಂ. ಮೈತ್ರಿ ಹಾಗೂ ವಿಭಾಗದ ಎಲ್ಲ ಸಿಬ್ಬಂದಿಯವರಿಗೆ ನನ್ನ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಎಲ್ಲಾ ರೀತಿಯಿಂದಲೂ ಬೆಂಗಾವಲಾಗಿ ನಿಂತ ನನ್ನ ತಂದೆ ಶ್ರೀ ಸಂಗಪ್ಪ, ತಾಯಿ ಶ್ರೀಮತಿ ಶಾಂತಾ, ಪತಿ ಶ್ರೀ ಬಸವರಾಜ, ತಂಗಿಯಂದಿರಾದ ಅನು, ಸುನೀತಾ, ಅಕ್ಕ ಮಂಜುಳಾ, ಮಕ್ಕಳಾದ ಸಂಜು, ಮೇಘ ಮತ್ತು ನನ್ನ ಬಂಧುಗಳಿಗೆ ನನ್ನ ಕೃತಜ್ಞತೆಗಳು.

ಅಧ್ಯಯನಕ್ಕೆ ಪೂರಕವಾಗಿ ಚರ್ಚಿಸಲು ಹಾಗೂ ಸದಾ ಆತ್ಮಸ್ಥೈರ್ಯ ತುಂಬುತ್ತಿದ್ದ ನನ್ನ ಸ್ನೇಹಿತೆಯರಾದ ವಿಜಯಶ್ರೀ ಇಟ್ಟಣ್ಣನವರ, ರಾಜೇಶ್ವರಿ ಶೀಲವಂತ, ಶಶಿಕಲಾ, ಅಂಜಲಿದೇವಿ, ಶೈಲಜಾ, ಪವಾಡಶೆಟ್ರ, ಕಲ್ಲಯ್ಯ ಹಿರೇಮಠ ಹಾಗೂ ಎಲ್ಲ ನನ್ನ ಸ್ನೇಹ ಬಳಗಕ್ಕೆ ಕೃತಜ್ಞತೆಗಳು.

ಮುಖ್ಯವಾಗಿ ಸ್ಮರಿಸಲೇಬೇಕಾದವರೆಂದರೆ ಮಗುವಿನೊಂದಿಗೆ ಅಧ್ಯಯನ ಕೈಗೊಳ್ಳಲು ಅವಕಾಶ ಮಾಡಿಕೊಟ್ಟ ಅಂದಿನ ವಾರ್ಡನ್ ಡಾ.ಡಿ.ಮೀನಾಕ್ಷಿಯವರಿಗೂ ನನ್ನ ಕೃತಜ್ಞತೆಗಳು ಅಕ್ಷರಗಳನ್ನು ಸಂಯೋಜಿಸಿಕೊಟ್ಟ ರವಿಕುಮಾರ್ ಇವರಿಗೂ ಕೃತಜ್ಞತೆಗಳು.

**ಸುಮಂಗಲಾ ಎಸ್.ಮೇಟಿ**

<u>ಪರಿವಿಡಿ</u>

## ಅಧ್ಯಯನದ ಉದ್ದೇಶ

ಮಧ್ಯಕಾಲೀನ ಕರ್ನಾಟಕ ಸಾಂಸ್ಕೃತಿಕ ಅಧ್ಯಯನಕ್ಕೆ ಕೆಲವು ಕನ್ನಡ ಕಾವ್ಯಗಳ ಅಭ್ಯಾಸ ಜರೂರಾಗಿ ನಡೆಯಬೇಕಾಗಿದೆ. ಇದಕ್ಕೆ ಪ್ರಮುಖ ಕಾರಣ, ಇವು ದೇಶಿಯ ಪಠ್ಯಗಳಾಗಿದ್ದರಿಂದಾಗಿ ಸ್ಥಳೀಯ ಚರಿತ್ರೆ, ಇವುಗಳ ಸ್ಥಾಯೀಗುಣ ಇದು ಒಂದು ಕಾರಣ. ಎರಡನೆಯದಾಗಿ, ನಾಡಿನ ದೊಡ್ಡ ಸಾಮ್ರಾಜ್ಯದ ಇತಿಹಾಸವನ್ನು ಮಾತ್ರ ದಾಖಲಿಸಿರುವ ನಾವು ಇಂಥ ಚಾರಿತ್ರಿಕ ಕಾವ್ಯಗಳನ್ನು ಉಪೇಕ್ಷೆ ಮಾಡಿದ್ದೇವೆ. ಮೂರನೆಯದಾಗಿ, ಈ ಕಾವ್ಯಗಳು ಪ್ರಮುಖ ಆಕರಗಳಿಗಿಂತಲೂ, ಕೆಲವೊಮ್ಮೆ ನಿಜ ಸಂಗತಿಗಳನ್ನು ತಮ್ಮ ಒಡಲಲ್ಲಿ ಇರಿಸಿಕೊಂಡಿರುತ್ತವೆ. ಹೀಗಾಗಿ ತಪ್ಪಾಗಿ ಬರೆದ ಇತಿಹಾಸವನ್ನು, ಹಿಂದುಮುಂದಾದ ಇತಿಹಾಸವನ್ನು ಮತ್ತು ಕಳಚಿಬಿದ್ದ ಇತಿಹಾಸದ ಕೊಂಡಿಯನ್ನು ಸರಿ ಮಾಡಲಿಕ್ಕೆ ಇಂಥ ಕಾವ್ಯಗಳ ಅಧ್ಯಯನದ ಅಗತ್ಯವಿದೆ. ಈ ದೃಷ್ಟಿಯಿಂದ ಸಿರಮನ ಸಾಂಗತ್ಯ, ನಿಂಬಸಾಮಂತ ಚರಿತೆ, ಕುಮಾರರಾಮ ಸಾಂಗತ್ಯ ಮುಂತಾದವುಗಳಂತೆ ಮೊಲ್ಲೆಬೊಮ್ಮಯ್ಯಗಳ ಕಾವ್ಯವೂ ಕೂಡಾ ಅಧ್ಯಯನ ಯೋಗ್ಯ ಪಠ್ಯವಾಗಿದೆ. ೧೨ನೇ ಶತಮಾನದ ಶರಣ ಚಳುವಳಿಯ ವಿಪ್ಲವಕ್ಕೆ ಕಾರಣವೆನಿಸಿದ ಮೊಲ್ಲೆಬೊಮ್ಮಯ್ಯರನ್ನು ಕಾವ್ಯದ ವಸ್ತುವಾಗಿರಿಸಿಕೊಂಡು ನಿರೂಪಿಸಿದ ಚಾರಿತ್ರಿಕ ಕೃತಿ ಇದಾಗಿದೆ.

ಈವರೆಗೂ ಕಾವ್ಯದ ನಾಯಕನ ಕುರಿತಾಗಿ ಕನ್ನಡ ಕಾವ್ಯಗಳಲ್ಲೆಲ್ಲಾ ಪ್ರಾಸಂಗಿಕವಾಗಿ ವಿವರಗಳು ಕಂಡುಬರುತ್ತದೆ. ಆದರೆ ಮೊಲ್ಲೆ ಬೊಮ್ಮಯ್ಯಗಳ ಕುರಿತಾಗಿ ಕವಿ ಧೂಪದ ರಾಚೇಶನು ೧೭೦೦ರಲ್ಲಿ 'ಮೊಲ್ಲೆ ಬೊಮ್ಮಯ್ಯಗಳ ಕಾವ್ಯ' ಎಂಬ ಕೃತಿಯನ್ನು ರಚಿಸಿದ್ದಾನೆ. ಅಜ್ಞಾತದಲ್ಲಿದ್ದ ಈ ಕೃತಿಯನ್ನು ಗದುಗಿನ ತೋಂಟದಾರ್ಯ ಸಂಸ್ಥಾನ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯು ೧೯೮೭ರಲ್ಲಿ ಪ್ರಕಟಿಸಿದೆ. ಡಾ.ಬಿ.ವ್ಹಿ.ಶಿರೂರವರು ಹಸ್ತಪ್ರತಿಯಲ್ಲೆ ಉಳಿದು ಅಳಿದು ಹೋಗುವ ಪ್ರತಿಯನ್ನು ದೊರಕಿಸಿಕೊಂಡು, ಶುದ್ಧಪಾಠವನ್ನು ನಿರ್ಣಯಿಸಿ ಶಾಸ್ತ್ರೋಕ್ತವಾಗಿ ಸಂಪಾದಿಸಿಕೊಟ್ಟಿದ್ದಾರೆ. ಮೊಲ್ಲೆಬೊಮ್ಮಯ್ಯಗಳ ಕಾವ್ಯದ ಪರಿಷ್ಕರಣಕ್ಕೆ ದೊರೆತದ್ದು ಎರಡು ಕಾಗದ ಪ್ರತಿಗಳು. ಅವುಗಳಲ್ಲಿ ಒಂದು ಪ್ರತಿ ಪ್ರಾಚೀನವಾಗಿದ್ದು, ಅಶುದ್ಧವಾಗಿದೆ. ಇನ್ನೊಂದು ಪ್ರತಿ ಶುದ್ಧವಾಗಿದ್ದು ಅದು ಅಲ್ಲಲ್ಲಿ ಮೊದಲಿನ ಪ್ರತಿಗಿಂತ ಭಿನ್ನವಾಗಿದೆ. ದೇಶಿ ಕಾವ್ಯ ಸಂಪಾದನೆಯಲ್ಲಿ ಕಡಿಮೆ ಪ್ರತಿಗಳನ್ನು ಬಳಸಿಕೊಂಡೇ ಕವಿಯು ಶಬ್ಧದೋಷ, ಭಾಷೆ ಅಶುದ್ಧಿಯನ್ನು ಪರಿಷ್ಕರಿಸಲು ಪ್ರಯತ್ನಿಸಿ ಇತ್ತೀಚಿನ ಸಂಪಾದನ

ವೈಧಾನಿಕತೆಯನ್ನಿಲ್ಲಿ ಬಳಸಿದ್ದಾರೆ. ಇವನ್ನು ಹೊರತುಪಡಿಸಿದರೆ ಡಾ.ಎಂ.ಎಂ.ಕಲಬುರ್ಗಿಯವರ 'ಮೊಲ್ಲೆ ಬೊಮ್ಮಯ್ಯಗಳ ಕಾವ್ಯ ಮತ್ತು ಶಾಸನಗಳು' ಎಂಬ ಲೇಖನ ಹಾಗೂ ಶಿವಾನಂದ ಕೆಳಗಿನಮನಿಯವರ 'ಮೊಲ್ಲೆಬೊಮ್ಮಯ್ಯಗಳ ಕಾವ್ಯ' ಎಂಬ ಲೇಖನಗಳು ಗಮನಾರ್ಹವಾಗಿವೆ.

ಸಾಮಾನ್ಯ ಶರಣನೊಬ್ಬ ಅರಸನ ಕೊಲೆಗೆ ಕೈ ಹಾಕುವುದು ಸಾಹಸದ ಕಾರ್ಯವೇ? ಇಂಥ ಕಾರ್ಯವನ್ನು ಮಾಡುವ ವ್ಯಕ್ತಿಗಳಿಗೆ ಅಂದು ಮಾನ್ಯತೆ ಇತ್ತೆ? ಹಾಗಾದರೆ ಶರಣರು 'ದಯೆಯೇ ಧರ್ಮದ ಮೂಲವಯ್ಯ' ಎಂದು ಬಡಿದಾಡಿದಂಥವರು ಕೊಲೆಯಂಥ ಕ್ರೂರತೆಗೆ ಯಾಕೆ ಕೈ ಹಾಕಿದರು? ಎಂಬೆಲ್ಲ ಪ್ರಶ್ನೆಗಳು ನಮ್ಮಲ್ಲಿ ಬರುವುದು ಸಹಜ. ಇಂಥ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹುಡುಕುವ ಒಂದು ಸಣ್ಣ ಪ್ರಯತ್ನವನ್ನಿಲ್ಲಿ ಮಾಡಿದ್ದೇನೆ.

ಶರಣಸ್ಥಲದ ಅನುಭಾವದ ಅಭಿವ್ಯಕ್ತಿಯನ್ನು ತಲುಪುವ ಪೂರ್ವದ ಹಂತವಾದ ನಿಷ್ಠೆ. ಸಮಯಾಚಾರ ಗಣಾಚಾರ ವೃಂದಕ್ಕೆ ಸೇರಿದ ವೀರಗಣೇಶ್ವರ ಇವನಾಗಿದ್ದಾನೆ. 'ಎನ್ನ ಸಮಯಾಚಾರಿ ಎಂಬರು' ಎಂಬ ಬಸವಣ್ಣನವರ ಹೇಳಿಕೆಯಲ್ಲಿ 'ಸಮಯ' ಎಂಬ ಪದಕ್ಕೆ 'ಧರ್ಮ' ಎಂಬ ಅರ್ಥವೇ ಇದೆ. ಪಂಪ, ರನ್ನ, ಪೊನ್ನರು 'ಜಿನಸಮಯ ದೀಪಕರಂತೆ': ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲೂ 'ಸಮಯ'ವೆಂದರೆ 'ಧರ್ಮ ಸಿದ್ಧಾಂತ'ವೆಂಬ ಅರ್ಥವೇ ಇದೆ. ಹರಿಹರ ಕವಿಯು 'ಶಿವಸಮಯವನ್ನುದ್ಧರಿವೆ' ಎಂದಿದ್ದಾನೆ. ಸಮಕಾಲೀನ ವಚನಕಾರರು 'ಶಿವಸಮಯವನ್ನು ಆಚರಿಸುವವರಾಗಿದ್ದರು. ಧರ್ಮ ರಕ್ಷಕರಾಗಿದ್ದರು. 'ತಾ ನಂಬಿದ ಧರ್ಮಕ್ಕೆ ತೊಂದರೆಯಾದರೆ ಧರ್ಮದ್ರೋಹಿಗಳನ್ನು ಶಿಕ್ಷಿಸಬೇಕು ಇಲ್ಲವೆ ಆತ್ಮಾರ್ಪಣೆ ಮಾಡಿಕೊಳ್ಳಬೇಕು ಎಂಬುದನ್ನು ತಮ್ಮ ಬದುಕಿನ ಉಸಿರಾಗಿಸಿಕೊಂಡು ಬದುಕಿ ಬಾಳಿದ ಶಿವಶರಣರಲ್ಲಿ ಜಗದೇವ, ಮೊಲ್ಲೆ ಬೊಮ್ಮಯ್ಯರು ಒಬ್ಬರು. ಕನ್ನಡ ಸಾಹಿತ್ಯದ ಐತಿಹಾಸಿಕ ಪರಂಪರೆಯಲ್ಲಿ ಹಲವಾರು ಕವಿಗಳು ಆಗಿಹೋಗಿದ್ದಾರೆ. ಅಲ್ಲಮಪ್ರಭುದೇವ ಹರಳಯ್ಯ, ಮಧುವಯ್ಯ, ಜಗದೇವ, ಮೊಲ್ಲೆಬೊಮ್ಮಯ್ಯ ಹೀಗೆ ಅನೇಕ ಶಿವಶರಣರು ತಮ್ಮ ಅನುಭವಗಳ ಮೂಲಕ ಕನ್ನಡ ಸಾಹಿತ್ಯದ ವೈಶಿಷ್ಟ್ಯತೆಯನ್ನು ವಿಸ್ತರಿಸಿದ್ದಾರೆ. ಇಂಥ ಶಿವಶರಣರ ತಾತ್ವಿಕ ವಿಚಾರ. ಆದರ್ಶ ಹಾಗೂ ಮೌಲ್ಯಗಳನ್ನು ಒಪ್ಪಿತ ವ್ಯವಸ್ಥೆಯ ಪ್ರತೀಕವಾಗಿ ಮೊಲ್ಲೆ ಬೊಮ್ಮಯ್ಯ ನಿಲ್ಲುತ್ತಾನೆ, ವೀರವ್ರತವನ್ನು ತೊಟ್ಟ ಧೀರ ಶಿವಭಕ್ತ.

ಬಿಜ್ಜಳನನ್ನು ಕೊಂದ ಜಗದೇವನ ಬಗ್ಗೆ ಅಧ್ಯಯನಗಳು ನಡೆದು ಬಂದಿವೆ. ಆದರೆ ಮೊಲ್ಲೆಬೊಮ್ಮಯ್ಯನ ಬಗೆಗೆ ಅಧ್ಯಯನಗಳು ನಡೆದು ಬಂದಿಲ್ಲ. ಹಲವಾರು ಕನ್ನಡ ಕಾವ್ಯಗಳು ಮೊಲ್ಲೆ ಬೊಮ್ಮಯ್ಯ ಎಂಬ ವ್ಯಕ್ತಿ ಒಬ್ಬನೇ ಎಂದೂ, ಇಬ್ಬರೂ ಬೇರೆ ಬೇರೆ ಎಂದೂ ಪ್ರತಿಪಾದನೆ ಮಾಡುತ್ತವೆ. ಹಾಗೆಯೇ ಇವರ ಕಾಲ ನಿರ್ಣಯದ ಬಗ್ಗೆಯೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಶಾಸನ, ಕಾವ್ಯ, ಜನಪದ ಕಥಾನಕಗಳು ನಮಗೆ ಆಕರಗಳಾಗಿ ನಿಲ್ಲುತ್ತವೆ. ಅವುಗಳ ಸಹಾಯದಿಂದ ಮೊಲ್ಲೆಬೊಮ್ಮಯ್ಯರ ಇತಿವೃತ್ತವನ್ನು ನಿರೂಪಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕಾವ್ಯದ ಕರ್ತೃ ಧೂಪದ ರಾಚೇಶ. ಇವನು ಕಲ್ಲಪುರ ಅಂದರೆ ರಾಯಚೂರ ಜಿಲ್ಲೆಯ, ಯಲಬುರ್ಗಿ ತಾಲ್ಲೂಕಿನ ಕಲ್ಲೂರು ಗ್ರಾಮದ ಪಡಿವಿಡಿ ಬಗೆಯ ಸಿದ್ದೇಶನ ಶಿಷ್ಯ. ಇವನ ಜೀವಿತ ಕಾಲ ಕ್ರಿ.ಶ.ಸು.೧೬೫೦.

'ಪಡಿವಿಡಿ ಬಗೆ' ಎಂಬುದು ಪಂಚಪೀಠಕ್ಕೆ ಸಂಬಂಧಿಸಿದ ಪದವಾಗಿದೆ. ಯಾಕೆ? ಕವಿ ಶರಣನೊಬ್ಬನನ್ನು ಹೀಗೆ ಚಿತ್ರಿಸಿದ್ದಾನೆ ಎಂಬುದನ್ನು ಕೂಡ ಇಲ್ಲಿ ಚರ್ಚಿಸಲಾಗಿದೆ. ಜಗದೇವ ಮತ್ತು ಮೊಲ್ಲೆ ಬೊಮ್ಮಯ್ಯರು ಶಿವಶರಣರೆಂಬುದು ಸತ್ಯ. ಹಾಗಾದರೆ ಇವರು ವಚನಗಳನ್ನು ಬರೆದರೇ? ಎಷ್ಟು ವಚನಗಳನ್ನು ಬರೆದರು ಎಂಬೆಲ್ಲ ಪ್ರಶ್ನೆಗಳಿಗೆ ಇಲ್ಲ ಉತ್ತರವಿದೆ. ವಚನರಚನೆಗೆ ಅನುಭಾವದ ಪಕ್ವತೆಬೇಕು. ಆ ಪಕ್ವತೆಯನ್ನು ಪಡೆಯುವ ಪೂರ್ವದ ಹಂತದಲ್ಲಿಯೇ ಇದ್ದು ಧರ್ಮ ರಕ್ಷಣೆಯನ್ನು ತಮ್ಮ ಕಾಯಕವನ್ನಾಗಿ ಮಾಡಿಕೊಂಡ ಹಲವಾರು ಶರಣರೊಂದಿಗೆ ಗುರುತಿಸಬೇಕಾದ ಹೆಸರು ಜಗದೇವ, ಮೊಲ್ಲೆ ಬೊಮ್ಮಯ್ಯರದಾಗಿದೆ.

ಕೆಲವು ಕನ್ನಡ ಕಾವ್ಯಗಳಿಗೆ ಇತಿಹಾಸದ ಗೌರವವಿರುತ್ತದೆ. ಉದಾಹರಣೆಗೆ ಪಂಪಭಾರತ, ಗಧಾಯುದ್ಧ, ಕುಮಾರವ್ಯಾಸ ಭಾರತ ಇಂಥ ಕೃತಿಗಳು ರಾಮಾಯಣ, ಮಹಾಭಾರತಗಳೆನಿಸಿದರೂ ಅರಸರ ಆಸ್ಥಾನದಲ್ಲಿ ಹುಟ್ಟಿದ ಕಾರಣ ಸಮಕಾಲೀನ ಸ್ಥಳೀಯ ಚಾರಿತ್ರಿಕ ದಾಖಲೆಗಳೇ ಆಗುತ್ತವೆ. ಇನ್ನು ಕೆಲವು ಕಾವ್ಯಗಳು ನೇರವಾಗಿ ಜನಸಮ್ಮುಖದಲ್ಲಿ ರಚನೆಗೊಂಡು ಸ್ಥಳೀಯ ಚರಿತ್ರೆಯ ಘನೀಕೃತ ಕೃತಿಗಳೆನಿಸುತ್ತವೆ. ಕವಿ ತನ್ನ ಪೂರ್ವದ ಕಾವ್ಯಗಳಿಂದ ಹಲವಾರು ವಿಷಯಗಳನ್ನು ಆಯ್ದುಕೊಂಡಿದ್ದಾನೆ.

ಬಸವಣ್ಣನ ಜನನ, ಮೊಲ್ಲೆ ಬೊಮ್ಮಯ್ಯ ಮತ್ತು ಜಗದೇವ ಇವರ ಜನನದ ಹಿನ್ನೆಲೆ ವಿವರಿಸುವ ಪೌರಾಣಿಕ ಕಲ್ಪನೆಗಳನ್ನು ಬಸವರಾಜ ದೇವರ ರಗಳೆ ಕಾಲಜ್ಞಾನ ವಚನಗಳಿಂದ ಆಯ್ದುಕೊಂಡಿದ್ದಾನೆ. ಬಿಜ್ಜಳನು ಬಸವಣ್ಣನಿಗೆ ಮಂತ್ರಿ ಪದವಿ ನೀಡಿದುದನ್ನು ಹರಿಹರನಿಂದ ಎರವಲು ಪಡೆದಿದ್ದಾನೆ. ಪ್ರಸ್ತುತಕವಿ ಧೂಪದ ರಾಚೇಶ ಹೇಳಿದ ಎಳೆಹೂಟೆ ಪ್ರಸಂಗದಲ್ಲಿ ಎತ್ತುಗಳು ಆಕಾಶಕ್ಕೆ ಹಾರಿದ ಮಧುವಯ್ಯಗಳ ಕಣ್ಣು ಕೀಳಲು ಹೊಸಕಣ್ಣು ಬಂದ, ಶೂಲಮಾಲೆಯಾದ ಕಥೆಗಳಿಗೆ ಜನಪದ ಕಾವ್ಯ ಪ್ರೇರಣೆ ಇತ್ತಿದೆ. ಜಗದೇವ ಮೊಲ್ಲೆ ಬೊಮ್ಮಯ್ಯರು ಬಿಜ್ಜಳನನ್ನು ಚಾವಡಿಯಲ್ಲಿ ಕೊಂದು ಹಾದಿಯುದ್ದಕ್ಕೂ ಸಾರುತ್ತಾ ಬಂದುದನ್ನು ಕಾಲಜ್ಞಾನ ವಚನಗಳಿಂದ ಆಯ್ದುಕೊಂಡಿದ್ದಾನೆ.

ಹೀಗೆ ೧೨ ಶತಮಾನದ ಶರಣನೊಬ್ಬನ ಚಿತ್ರಣ ನೀಡಲು ಬಯಸಿದ ಕವಿ ಅದಕ್ಕೆ ಪೂರಕವಾಗಿ ಬಸವಣ್ಣ ಹರಳಯ್ಯ, ಮಧುವರಸ, ಬಿಜ್ಜಳ, ಜಗದೇವರ ಕಥೆಗಳನ್ನಿಲ್ಲಿ ವಿವರಿಸಲು ತನಗಿಂತ ಪೂರ್ವದ ಹಲವಾರು ಕಾವ್ಯಗಳಿಂದ ಐತಿಹಾಸಿಕ ಎಳೆಗಳನ್ನು ಆಯ್ದುಕೊಂಡು ಚಾರಿತ್ರಿಕ ಕಾವ್ಯವನ್ನು ಹೆಣೆದಿದ್ದಾನೆ.

ಕಾವ್ಯದ ವಸ್ತುವಾದ ಶರಣರ ಬದುಕು, ಆದರ್ಶ ಹಾಗೂ ರಾಜಕೀಯ ವೈರುಧ್ಯತೆಗಳ ನಡುವೆ ನಡೆದ ಸಂಘರ್ಷವನ್ನು ಕರಾರುವಕ್ಕಾಗಿ ನಿರೂಪಿಸುವ ಈ ಕೃತಿಗೆ ಐತಿಹಾಸಿಕ ಮಹತ್ವವಿದೆ. ಬಿಜ್ಜಳ, ಜಗದೇವ, ಮೊಲ್ಲೆಬೊಮ್ಮಯ್ಯ ಹರಳಯ್ಯ ಮಧುವರಸರ ಚಿಮ್ಮಾವುಗೆಯ ಪ್ರಸಂಗ, ಹರಳಯ್ಯ ಮಧುವರಸರು ಬೀಗರಾದದು, ಎಳೆಹೂಟೆ ಪ್ರಸಂಗ, ಬಿಜ್ಜಳನ ವಧೆ ಇತ್ಯಾದಿ ಮಹತ್ವದ ಸಂಗತಿಗಳಿಗೆ ಐತಿಹಾಸಿಕ ಪುರಾವೆಗಳನ್ನು ಸಂಯೋಜಿಸಿಕೊಂಡು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು. ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಈ ಕೃತಿ ನೀಡುವ ಮಾಹಿತಿ ಅನನ್ಯವಾದುದಾಗಿದೆ. ಪ್ರಾಚೀನ ಕವಿಗಳ ಧಾರ್ಮಿಕ ಭಾವುಕ ಮನೋಭಾವದಿಂದಾಗಿ ಹಾಗೂ ಜನರ ಮೂಢತೆಯಿಂದಾಗಿಯೋ ಅಸಂಖ್ಯೆ ಕವಿ ಕೃತಿಗಳು ಕಾಲಗರ್ಭದಲ್ಲಿ ಹುದುಗಿ ಹೋಗಿರುವ ಸಂಗತಿ ನಮಗೆಲ್ಲ ತಿಳಿದಿದೆ. ಆದರೂ ಚರಿತ್ರೆಯಲ್ಲಿ ಚದುರಿ

ಹೋಗಿರುವ ಅಂಶಗಳನ್ನು ಜೋಡಿಸಿಕೊಂಡು ಚರಿತ್ರೆಯನ್ನು ಕಟ್ಟಿಕೊಡುವ ಕೆಲಸವನ್ನು ಸಂಶೋಧಕರು ಮಾಡುತ್ತಲೇ ಇದ್ದಾರೆ.

ಮೊಲ್ಲೆಬೊಮ್ಮಯ್ಯಗಳ ಕಾವ್ಯವು ಕಾವ್ಯದ ನಾಯಕ ಮೊಲ್ಲೆಬೊಮ್ಮಯ್ಯಗಳ ಚರಿತ್ರೆ ಹರಳಯ್ಯ, ಮಧುವರಸ, ಬಸವಣ್ಣನವರ ಚರಿತ್ರೆ ಹಾಗೂ ಮೂರು ಶರಣರ ಶಿಕ್ಷೆ, ಬಿಜ್ಜಳನ ವಧೆ ಎಂಬ ಮೂರು ಭಾಗಗಳಲ್ಲಿ ಸಮಾವೇಶಗೊಂಡಿದೆ. ಶರಣ ಸಂಸ್ಕೃತಿಯ ಬದುಕನ್ನೆ ಅನಾವರಣಗೊಳಿಸುವ ಕಾವ್ಯವು ಸಮಕಾಲೀನ ಬದುಕು, ಆದರ್ಶಗಳನ್ನು ಬಿಚ್ಚಿಡುತ್ತದೆ. ಹಾಗೆಯೇ ಶರಣರು ಮೆರೆದ ಪವಾಡಗಳು, ಐತಿಹ್ಯಗಳು, ಆಚರಣೆ, ನಂಬಿಕೆ, ಸಂಪ್ರದಾಯಗಳು, ಎಳೆಹೂಟೆ ಪ್ರಸಂಗ ಎಲ್ಲವೂ ಸಾಂಸ್ಕೃತಿಕ ಅಧ್ಯಯನಕ್ಕೆ ಯೋಗ್ಯ ಪುರಾವೆಗಳನ್ನು ಒದಗಿಸುತ್ತವೆ. ಈ ಕಾವ್ಯಕ್ಕೆ ಒಂದು ಸಾಂಸ್ಕೃತಿಕ ಮಹತ್ವವಿದೆ. ಯಾವುದೇ ಪದಗಳು ಮೇಲ್ನೋಟಕ್ಕೆ ಸ್ವತಂತ್ರವೆನಿಸಿದರೂ ಅವೆಲ್ಲ ಒಂದು ಜನಾಂಗದ ಸಂಸ್ಕೃತಿಯ ಗಾಢವಾದ ಸಂಬಂಧವನ್ನು ಬಿಂಬಿಸುತ್ತವೆ. ಕಾವ್ಯದಲ್ಲಿ ಬರುವ ಕುಂಕುಮ, ಸೀರೆ, ಕಳಸ, ಕನ್ನಡಿ, ಮದುವೆಯ ವೈಭವ, ಮಂಟಪದ ವರ್ಣನೆಗಳು ಇವೆಲ್ಲಾ ಸಾಂಸ್ಕೃತಿಯ ವಾಹಕವಾಗಿ ಕೆಲಸ ಮಾಡುತ್ತವೆ. ಹಾಗೆಯೇ ಅಂದಿನ ಸಾಂಸ್ಕೃತಿಯ ಬದುಕನ್ನು ಅನಾವರಣಗೊಳಿಸುತ್ತವೆ. ಜನ ಸಮೂಹದ ಬಾಯಿಂದ ಹೊರಡುವ ಮಾತುಗಳು, ಗಾದೆಗಳು, ಭಾಷಾಬಳಕೆ ಇವೆಲ್ಲಾ ಸಾಮಾಜಿಕ ಆಯಾಮವನ್ನು ಚಿತ್ರಿಸಲು ಸಹಕಾರಿಯಾಗಿವೆ.

ಕೆಲವು ಕಾವ್ಯಗಳಿಗೆ ಚಾರಿತ್ರಿಕ ಚೌಕಟ್ಟಿದ್ದರೂ ಕವಿಯು ಬಳಸುವ ವರ್ಣನೆ, ಕಲ್ಪನೆ, ಉಪಮೆಗಳು ಅಧಿಕವಾದಾಗ ಅದು ಪೌರಾಣಿಕ ಕಾವ್ಯವಾಗುತ್ತದೆ. ಅತಿಯಾದ ಧಾರ್ಮಿಕ ಪ್ರೀತಿ, ಹೀಗೆ ಕಾವ್ಯನಾಯಕನನ್ನು ಮಾನವಾತೀತವಾಗಿ ಚಿತ್ರಿಸಲು ಹೋಗಿ ಸತ್ಯವನ್ನೆ ಮರೆಮಾಚಿಬಿಡುತ್ತದೆ. ಇಂಥ ಕಾಲ್ಪನಿಕ ಪರದೆಯನ್ನು ಸರಿಸಿದಾಗ ಕಾವ್ಯವು ಐತಿಹಾಸಿಕ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಮಹತ್ವವನ್ನು ಪಡೆಯಲು ಸಾಧ್ಯವಾಗುತ್ತದೆ.

ಶ್ರದ್ಧೆಗೆ ಕಾರಣವಾದ ಧರ್ಮ ಹಾಗೂ ಬದುಕಿನಲ್ಲಿ ಕಾಣುವ ವಾಸ್ತವ್ಯಗಳು ಎರಡನ್ನು ಕೂಡುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾನೆ. ಶೈವ ಎಂಬುದು 'ಶಿವನ ಆರಾಧಕ' ಎಂಬುದನ್ನು ಸೂಚಿಸುತ್ತದೆ. ವೀರ ವೃತ್ತಿಯನ್ನು ಕೈಗೊಂಡ ಶಿವಭಕ್ತರ ಹಿನ್ನಲೆಯಲ್ಲಿಯೇ 'ಶೈವವೂ ವೀರಶೈವವಾಗಿ' ಪರಿವರ್ತನೆಯನ್ನು ಪಡೆದಿದೆ ಎನ್ನಬಹುದು. ಪ್ರಭುತ್ವ ಸಂಕೇತವಾದ ಅರಮನೆ ಹಾಗೂ ಪಾಂಡಿತ್ಯದ ಸಂಕೇತವಾದ ಮಹಾಮನೆಯ ಬೌದ್ಧಿಕ ವರ್ಚಸ್ಸು ಇಂದಿಗೂ ಜನಮನದಲ್ಲಿ ಉಳಿದುಕೊಂಡು ಬಂದಿದೆ ಅರಮನೆಯ ಭೌತಿಕ ಸೊಬಗು ಮಣ್ಣಾಗಿ ಹೋಗಿದೆ. ಹೀಗೆ ಶರಣರ ಬದುಕು ಆದರ್ಶ, ತತ್ವಗಳು ಇಂದಿಗೂ ಜನಮನ್ನಣೆಯನ್ನು ಹೊಂದಿದೆ.

ಒಂದು ಕಾವ್ಯಕ್ಕೆ ಸಾಂಸ್ಕೃತಿಕ ಮಹತ್ವವಿದ್ದಂತೆ, ಸಾಹಿತ್ಯಿಕ ಗುಣಧರ್ಮಗಳು ಇರುತ್ತವೆ. ದೇಶಿಯ ಕಾವ್ಯವಾದ ಈ ಕಾವ್ಯವೂ ದೇಶಿಯ ಛಂದೋಲಯದಲ್ಲಿ ರಚನೆಗೊಂಡು, ಜನಪದರು ಹಾಡಲು ಅನುಕೂಲವಾಗುವಂತೆ, ಗಮಕದಲ್ಲಿ ರಚಿಸಿದ ಈ ಕಾವ್ಯವು ಆಡುನುಡಿ, ಗಾದೆಮಾತು ಮತ್ತು ಅಂಲಕಾರಗಳಲ್ಲಿ ದೇಶಿಯ ಸೊಗಡನ್ನು ಹೊಂದಿದೆ.

### ಅಧ್ಯಯನದ ವ್ಯಾಪ್ತಿ

ಮೇಲೆ ವ್ಯಕ್ತಪಡಿಸಿದ ಉದ್ದೇಶಕ್ಕೆ ಅನುಗುಣವಾಗಿ ಅಧ್ಯಯನದ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ. ಹಲವಾರು ನಡುಗನ್ನಡ ಕಾವ್ಯಗಳನ್ನು ಹಾಗೂ ಆಧುನಿಕ ಗ್ರಂಥಗಳನ್ನು, ಪೂರಕ ಪಠ್ಯಗಳಾಗಿ ಬಳಸಿಕೊಳ್ಳಲಾಗಿದೆ. ಕಲ್ಲೂರು, ಕೋಡಿಕೋಪ್ಪದ ಶಾಸನಗಳನ್ನು ಬಳಸಿಕೊಳ್ಳಲಾಗಿದೆ.

ಈ ಸಂಪ್ರಬಂಧವು ಆರು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಮೊಲ್ಲೆಬೊಮ್ಮಯ್ಯಗಳ ಕಾವ್ಯ ಚಾರಿತ್ರಿಕ ಅಧ್ಯಯನ, ಮೊಲ್ಲೆಬೊಮ್ಮಯ್ಯಗಳ, ಮೊಲ್ಲೆಬೊಮ್ಮಯ್ಯಗಳ ಕಾವ್ಯ: ಸಾಂಸ್ಕೃತಿಕ ಅಧ್ಯಯನ, ಮೊಲ್ಲೆಬೊಮ್ಮಯ್ಯಗಳ  ಕಾವ್ಯ: ಸಾಹಿತ್ಯಿಕ ಅಧ್ಯಯನ, ಎಂಬ ಆರು ಆಧ್ಯಾಯಗಳಿವೆ. ಅನುಬಂಧದಲ್ಲಿ ಶಾಸನಪಠ್ಯ, ದಾಖಲೆಗಳು, ಛಾಯಚಿತ್ರಗಳು, ಗ್ರಂಥಋಣವನ್ನು ಕೊಡಲಾಗಿದೆ. ಮೊಲ್ಲೆಬೊಮ್ಮಯ್ಯರ ಕಾವ್ಯ ಮತ್ತು ಆ ಪರಿಸರದ ಶಾಸನ ಹಾಗೂ ಜನಪದ ವದಂತಿಗಳನ್ನು ಆಧರಿಸಿ ಈ ಸಂಪ್ರಬಂಧದ ವ್ಯಾಪ್ತಿಯನ್ನು ಕಲ್ಲೂರಿನಿಂದ ಕಲ್ಯಾಣದವರೆಗೂ ವಿಸ್ತರಿಸಲಾಗಿದೆ.

* * *

ಮಧ್ಯಕಾಲೀನ ಕರ್ನಾಟಕದ ಸಂಸ್ಕೃತಿಯ ಪ್ರತೀಕವಾದ ಹಲವಾರು ಕಾವ್ಯಗಳಿಗೆ ಇತಿಹಾಸದ ಗೌರವವಿರುತ್ತದೆ. ಉದಾಹರಣೆಗೆ ಪಂಪಭಾರತ, ಗಧಾಯುದ್ಧ, ಕುಮಾರವ್ಯಾಸ ಭಾರತ ಇಂಥ ಕೃತಿಗಳು ರಾಮಾಯಣ, ಮಹಾಭಾರತಗಳೆನಿಸಿದರೂ, ಅರಸನ ಆಸ್ಥಾನದಲ್ಲಿ ಹುಟ್ಟಿದ ಕಾರಣ ಸಮಕಾಲೀನ ಸ್ಥಳೀಯ, ಚಾರಿತ್ರಿಕ ದಾಖಲೆಗಳೇ, ಆಗುತ್ತವೆ. ಇನ್ನು ಕೆಲವು ಕಾವ್ಯಗಳು ನೇರವಾಗಿ ಜನಸಮ್ಮುಖದಲ್ಲಿ ರಚನೆಗೊಂಡು ಸ್ಥಳೀಯ ಚರಿತ್ರೆಯ ಘನೀಕೃತ ಕೃತಿಗಳೆನಿಸುತ್ತವೆ. ದೊಡ್ಡ ಸಾಮ್ರಾಜ್ಯದ ಇತಿಹಾಸವನ್ನು ದಾಖಲಿಸಿರುವ ನಾವು ಇಂಥ ಚಾರಿತ್ರಿಕ ಕಾವ್ಯಗಳನ್ನು ಉಪೇಕ್ಷೆ ಮಾಡಿದ್ದೇವೆ. ಇಂಥ ಕಾವ್ಯಗಳು ಪ್ರಮುಖ ಆಕರಗಳಿಗಿಂತಲೂ, ಕೆಲವೊಮ್ಮೆ ನಿಜ ಸಂಗತಿಗಳನ್ನು ತಮ್ಮ ಒಡಲಿನಲ್ಲಿ ಇರಿಸಿಕೊಂಡಿರುತ್ತವೆ. ಹೀಗಾಗಿ ತಪ್ಪಾಗಿ ಬರೆದ ಇತಿಹಾಸವನ್ನು, ಹಿಂದುಮುಂದಾದ ಇತಿಹಾಸವನ್ನು, ಕಳಚಿ ಬಿದ್ದ ಇತಿಹಾಸದ ಕೊಂಡಿಯನ್ನು ಸರಿಮಾಡಲಿಕ್ಕೆ ಇಂಥ ಕಾವ್ಯಗಳು ಸಹಕಾರಿಯಾಗಿವೆ. ಅವುಗಳಲ್ಲಿ ಮೋಲ್ಲೆಬೊಮ್ಮಯ್ಯಗಳ ಕಾವ್ಯ ಐತಿಹಾಸಿಕವಾಗಿ ಹೆಸರಿಸಬೇಕಾದ ಕೃತಿಯಾಗಿದೆ. ಶರಣರ ಬದುಕು, ಆದರ್ಶ, ರಾಜಕೀಯ ವೈರುಧ್ಯತೆಗಳ ನಡುವೆ ನಡೆದ ಸಂಘರ್ಷವನ್ನು ಕರಾರುವಕ್ಕಾಗಿ ನಿರೂಪಿಸುವ ಈ ಕೃತಿಗೆ ಐತಿಹಾಸಿಕ ಮಹತ್ವವಿದೆ.

ಬಿಜ್ಜಳ ಚಾರಿತ್ರಿಕವಾಗಿ ಐತಿಹಾಸಿಕವಾಗಿ ದಾಖಲೆಯಾಗಿರುವ ವ್ಯಕ್ತಿ ಎಂಬುದು ಸತ್ಯ. ಹಾಗೆಯೇ ಬಸವಣ್ಣ, ಹರಳಯ್ಯ, ಮಧುವರಸ, ಸಿಂಧ ಅರಸ ಕಾಮರಾಜ, ಮೋಲ್ಲಬೊಮ್ಮಯ್ಯ ಎಲ್ಲರೂ ಚಾರಿತ್ರಿಕ ವ್ಯಕ್ತಿಗಳೇ.

ಹನ್ನೆರಡನೇ ಶತಮಾನದಲ್ಲಿ ಕಲ್ಯಾಣಕಾಂತ್ರಿಯಲ್ಲಿ ಜಗದೇವನೊಂದಿಗೆ ಮಹತ್ವದ ಪಾತ್ರ ವಹಿಸಿದ ಮೋಲ್ಲೆಬೊಮ್ಮಯ್ಯನ ಚರಿತೆ ಈವರೆಗೂ ಸ್ಪಷ್ಟವಾಗಿಲ್ಲ. ಇದಕ್ಕೆ ಕವಿಗಳ ಧಾರ್ಮಿಕ, ಭಾವುಕ ಮನೋಭಾವ ಕಾರಣವಾಗಿರಬಹುದು ಅಥವಾ ಜನತೆಯ ಮೂಢತೆ ಕಾರಣವಿರಬಹುದು. ಹೀಗೆಯೇ ಅಸಂಖ್ಯೆ ಕವಿ ಕೃತಿಗಳು ಕಾಲಗರ್ಭದಲ್ಲಿ ಹುದುಗಿ ಹೋಗಿರುವ ಸಂಗತಿ ನಮಗೆಲ್ಲ ತಿಳಿದಿದೆ. ಅರಸನೊಬ್ಬನ ಕೊಲೆ ಸಾಮಾನ್ಯ ಶರಣನೊಬ್ಬನಿಂದ ಆಯಿತೆಂಬ ಮಹತ್ವದ ಅಂಶವನ್ನು ಒಳಗೊಂಡ ಮೋಲ್ಲೆಬೊಮ್ಮಯ್ಯನ ಕಾವ್ಯ ಅಪಾರವಾದ ಐತಿಹಾಸಿಕ ಪುರಾವೆಯನ್ನು ಒದಗಿಸುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹಲವಾರು ಕವಿ, ಕೃತಿಗಳು ಅಲಕ್ಷಿತವಾಗಿವೆ. ಇಂಥ ಅಲಕ್ಷಿತ ಕೃತಿಗಳಲ್ಲೂ ಧಾರ್ಮಿಕ, ಚಾರಿತ್ರಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಮಹತ್ವದ ಅಂಶಗಳಿರುವುದು ಸ್ಪಷ್ಟವಾಗುತ್ತದೆ. ಇಂಥ ಒಂದು ಮಹತ್ವವನ್ನೊಳಗೊಂಡ ಅಲಕ್ಷಿತ ಕೃತಿಗಳಲ್ಲಿ 'ಮೊಲ್ಲೆಬೊಮ್ಮಯ್ಯಗಳ ಕಾವ್ಯ' ವೂ ಒಂದು. ಇದೊಂದು ವೀರಶೈವ ಕೃತಿ. ಮುಂದೆ ಬಂದಿರುವ ಯಾವ ಕವಿಗಳೂ ಈ ಕೃತಿಯನ್ನಾಗಲಿ, ಕವಿಯನ್ನಾಗಲಿ ಉಲ್ಲೇಖಿಸದೇ ಇರುವುದು ಸೋಜಿಗದ ಸಂಗತಿಯೇ. ಸರಿ. ಈ ಕಾವ್ಯದ ನಾಯಕನ ಕುರಿತಾಗಿ ಹಲವಾರು ವೀರಶೈವ ಕಾವ್ಯಗಳು ಸಾಂಧರ್ಭಿಕವಾಗಿ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಉಲ್ಲೇಖಿಸಿವೆ.

೧೨ನೇ ಶತಮಾನ ಮಹತ್ವಪೂರ್ಣವಾದುದು. ರಾಜಕೀಯ, ಆರ್ಥಿಕ, ಧಾರ್ಮಿಕ ಜೀವನವನ್ನೆ ಪರಿವರ್ತನೆಗೊಳ್ಳಪಡಿಸಿದ ಕಾಲ ವಿಶೇಷವಾಗಿ 'ಬಿಜ್ಜಳರಾಯನ' ಕೊಲೆ ನಡೆದದ್ದು, ಸಾಮಾನ್ಯ ಶಿವಭಕ್ತನಿಂದ ಕೊಲೆಯಾಗುವ ಸನ್ನಿವೇಶ ಎಲ್ಲವನ್ನು ವೀಕ್ಷಿಸಿದಾಗ, ಮೊಲ್ಲೆಬೊಮ್ಮಯ್ಯ ಒಬ್ಬ ಚಾರಿತ್ರಿಕ ವ್ಯಕ್ತಿ ಎಂಬುದು ಸತ್ಯ.'[೧] ಇಲ್ಲಿಯವರೆಗೂ ಅಸ್ಪಷ್ಟವಾಗಿದ್ದ ಮೊಲ್ಲೆಬೊಮ್ಮಯ್ಯನ ಚರಿತ್ರೆಯು, ಕವಿ ಧೂಪದ ರಾಚೇಶ ವಿರಚಿತ ಕೃತಿ 'ಮೊಲ್ಲೆಬೊಮ್ಮಯ್ಯನ ಕಾವ್ಯ'ದಿಂದ ಸ್ಪಷ್ಟತೆಯನ್ನು ಪಡೆದಿದೆ.

ಮೊಲ್ಲೆಬೊಮ್ಮಯ್ಯ ಶರಣರ ಮೌಲ್ಯಗಳನ್ನು ಒಪ್ಪಿತ ವ್ಯವಸ್ಥೆಯ ಪ್ರತೀಕವಾಗಿ ನಿಲ್ಲುತ್ತಾನೆ. ಶರಣಸ್ಥಲದ ಅನುಭಾವದ ಅಭಿವ್ಯಕ್ತಿಯನ್ನು ತಲುಪುವ ಪೂರ್ವದ ಹಂತವಾದ ನಿಷ್ಠೆ, ಸಮಾಚಾರ, ಗಣಾಚಾರ ವೃಂದಕ್ಕೆ ಸೇರಿದ ಶಿವಭಕ್ತ.

**ಇತಿವೃತ್ತ**

ಹನ್ನೆರಡನೆಯ ಶತಮಾನದ ಮಹತ್ವದ ಘಟ್ಟವಾದ ಕಲ್ಯಾಣ ಕ್ರಾಂತಿಯ ಸುತ್ತ ಹೆಣೆದ ಕಾವ್ಯಗಳಲ್ಲೆಲ್ಲಾ ನಾವು ಜಗದೇವ, ಮೊಲ್ಲೆಬೊಮ್ಮಯ್ಯರ ಹೆಸರನ್ನು ಹಾಗೆಯೇ ಬಿಜ್ಜಳನ ಕೊಲೆ ಎಲ್ಲವನ್ನು ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಉಲ್ಲೇಖಿಸಿದ್ದನ್ನು ಕಾಣುತ್ತೇವೆ. ಐತಿಹಾಸಿಕವಾದ ಇಂಥ ಒಂದು ಘಟನೆಯನ್ನು ದಾಖಲಿಸುವ, ಚರಿತ್ರೆಯನ್ನು ಬಿಚ್ಚಿಡುವ ಕಾವ್ಯಗಳು ಅನೇಕ. ಭೀಮಕವಿಯ ಬಸವಪುರಾಣ, ಷಡಕ್ಷರ ಕವಿಯ ಬಸವರಾಜ ವಿಜಯಂ, ಕಾಲಜ್ಞಾನ ವಚನಗಳು, ಬಸವೇಶ್ವರ ಕಾವ್ಯ, ವೀರಶೈವಾಮೃತ ಪುರಾಣ, ಶಿವಶರಣರ ಕಥಾ ರತ್ನಕೋಶ. ಇತ್ಯಾದಿ.

ಹೀಗೆ ಉಲ್ಲೇಖಿತಗೊಂಡಿರುವ ಚಾರಿತ್ರಿಕ ವ್ಯಕ್ತಿಯ ಜೀವನದ ಸಮಗ್ರ ಸನ್ನಿವೇಶಗಳ ಚಿತ್ರಣ ತಿಳಿಯುವ ಅವಶ್ಯಕತೆ ಇದೆ. ಇತಿವೃತ್ತ ಎಂಬುದು ಜೀವನದ ವೃತ್ತಾಂತವಾಗಿದೆ. ಬಸವ, ಬಿಜ್ಜಳರ ಸಮಕಾಲೀನವಾಗಿ ಬದುಕಿ ಬಾಳಿದ ಶಿವಭಕ್ತ ಮೊಲ್ಲೆಬೊಮ್ಮಯ್ಯನ ಜೀವನದ ವಿವಿಧ ಸನ್ನಿವೇಶಗಳನ್ನು ಪದರು ಪದರು ಬಿಚ್ಚಿ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಿದೆ.

ಪ್ರತಿಯೊಬ್ಬ ವ್ಯಕ್ತಿಯ ಬದುಕು ಒಂದೊಂದು ತೆರನಾಗಿರುತ್ತದೆ. ಜೀವನದಲ್ಲಿ ಎದುರಾಗುವ ಸಮಯ, ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಬದುಕು ಪರಿವರ್ತನೆಯಾಗುತ್ತದೆ. ಹೀಗೆ ಇಂಥ ಚಿತ್ರಣವನ್ನು ನಾವು ಮೊಲ್ಲೆಬೊಮ್ಮಯ್ಯನಲ್ಲಿ ಕಾಣುತ್ತೇವೆ.

**ಹೆಸರು**

ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಒಂದು ಹೆಸರು ಇರಲೇಬೇಕು. ಇಟ್ಟ ಹೆಸರಿನೊಂದಿಗೆ ಊರ ಹಿರಿಯರು, ತಂದೆ-ತಾಯಿ, ಕುಲದೈವ, ಆರಾಧ್ಯದೈವ ಹಾಗೆಯೇ ಸಮಾಜವು ಕೂಡ ಅನ್ವರ್ಥಕ ಹೆಸರು ಕೊಟ್ಟಿರುವುದು ಕಂಡುಬರುತ್ತದೆ. ಇಂಥ ಒಂದು ಹೆಸರು ಮೊಲ್ಲೆಬೊಮ್ಮಯ್ಯನದಾಗಿದೆ. 'ಮೊಲ್ಲೆಬೊಮ್ಮಯ್ಯಗಳ ಕಾವ್ಯ'ದ ನಾಯಕನ ಹೆಸರು ಕೂಡ ಇದೇ ರೀತಿಯಾಗಿದೆ. ಕಾವ್ಯಗಳಲ್ಲೆಲ್ಲ ಈ ಹೆಸರು ಮೊಲ್ಲೆಬೊಮ್ಮಯ್ಯ, ಮಲ್ಲೆ ಬೊಮ್ಮಯ್ಯ, ಮಲ್ಲಿಬೊಮ್ಮಯ್ಯ, ಮೊಲ್ಲೆಯಬ್ರಹ್ಮಯ್ಯ, ಮೊಲ್ಲಿಬೊಮ್ಮಣ್ಣ, ಮಲ್ಲಣ್ಣ, ಬೊಮ್ಮಯ್ಯ ಎಂದೆಲ್ಲ ಉಲ್ಲೇಖಿಸುತ್ತವೆ.

ಕನ್ನಡದ ಕಾವ್ಯಗಳಲ್ಲೆಲ್ಲ ಕೆಲವು ಮೊಲ್ಲೆಬೊಮ್ಮಯ್ಯ ಒಬ್ಬನೇ ಎಂದೂ, ಇನ್ನು ಕೆಲವು ಕಾವ್ಯಗಳು ಮಲ್ಲಯ್ಯ, ಬೊಮ್ಮಯ್ಯ ಎಂಬ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು ಎಂದು ಹೇಳುತ್ತವೆ.

ಆದರೆ 'ಮೊಲ್ಲೆಬೊಮ್ಮಯ್ಯಗಳ ಕಾವ್ಯ'ದ ಕಥಾ ಹಂದರವನ್ನು ಹೆಣೆದ ಕವಿ 'ಧೂಪದ ರಾಚೇಶ' 'ಮೊಲ್ಲೆಬೊಮ್ಮಯ್ಯ' ಎಂಬ ಹೆಸರಿಗೆ ಸ್ಪಷ್ಟ ಚಿತ್ರಣವನ್ನು ನೀಡಿ, 'ಮೊಲ್ಲೆಬೊಮ್ಮಯ್ಯ' ಒಬ್ಬನೇ ವ್ಯಕ್ತಿ. ಇವರು ಇಬ್ಬರಲ್ಲ ಎಂಬುದಾಗಿ ಸ್ಪಷ್ಟ ಪಡಿಸುತ್ತದೆ.

ಡಾ.ಎಂ.ಎಂ.ಕಲಬುರ್ಗಿಯವರು ಮೊಲ್ಲೆಬೊಮ್ಮಯ್ಯನೆಂಬುದು ಪ್ರಚಲಿತ ಹೆಸರು. ಈ ಹೆಸರಿನ ಬಗ್ಗೆ ಮೂರು ಭಿನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

* ಕವಿ ಧೂಪದ ರಾಚಯ್ಯನ ಪ್ರಕಾರ ಮೊಲ್ಲೆಬೊಮ್ಮಯ್ಯ ಕಲ್ಲೂರಿನ ಕಲ್ಲಿದೇವರನ್ನು ಮೊಲ್ಲೆಹೂವುಗಳಿಂದ ಪೂಜಿಸುತ್ತಿದ್ದ ಕಾರಣ ಈ ಹೆಸರು ರೂಢವಾಯ್ತು. ಸತತ ಮೊಲ್ಲೆಯ ಪುಷ್ಪ ತಂದು, ಕಲ್ಲೇಶಗರ್ಪಿಸುತಿರಲ್ಕೆಯಾಂತ್ಯಂತ ಹರುಷದಿ ಮೆಚ್ಚಿ ಮೊಲ್ಲೆಬೊಮ್ಮಯ್ಯನಿಂದೆ ನಿಪಭಿದಾನ ವಿತ್ತ' (೪-೮) ಎಂದು ಕಾವ್ಯವೂ ಕೂಡ ವಿವರಣೆಯನ್ನು ಒದಗಿಸುತ್ತದೆ.

* ಕೋಡಿಕೊಪ್ಪ ಗ್ರಾಮದ ಮೂಲ ಬ್ರಹ್ಮೇಶ್ವರವೇ ಜನಬಳಕೆಯಲ್ಲಿ ಮೊಲ್ಲೆಬೊಮ್ಮಯ್ಯ ಆಗಿ ಅದೇ ಹೆಸರನ್ನು ಇವನಿಗೆ ಇಟ್ಟಿರಬಹುದು[೨] ಎಂದು ಅಭಿಪ್ರಾಯಪಡುತ್ತಾರೆ. ಕಾವ್ಯವಲ್ಲದೇ, ಕೋಡಿಕೊಪ್ಪದ ಶಾಸನಗಳು ಕಲ್ಲೂರಿನ ೨ ಶಾಸನಗಳು ಮೊಲ್ಲೆಬೊಮ್ಮಯ್ಯನ ಹೆಸರನ್ನು ಉಲ್ಲೇಖಿಸುತ್ತವೆ.

* ಹಾಗೆಯೇ ಎಂ.ಎಂ.ಕಲುಬುರ್ಗಿಯವರು ಇನ್ನೊಂದು ಅಭಿಪ್ರಾಯ ಮಂಡಿಸುತ್ತಾರೆ.

'ಮೊಲ್ಲೆಯ' ಎಂಬ ಅಡ್ಡ ಹೆಸರಿನ ಕುಟುಂಬಗಳು ಆ ಪ್ರದೇಶದಲ್ಲಿದ್ದು, ಈ ಕುಟುಂಬದ ಹೆಸರು 'ಮೊಲ್ಲೆ' ಮತ್ತು ಕೋಡಿಕೊಪ್ಪದ ದೇವರ ಹೆಸರು 'ಬ್ರಹ್ಮಯ್ಯ' ಸೇರಿ ಮೊಲ್ಲೆಬೊಮ್ಮಯ್ಯ ಆಗಿರುವ ಸಾಧ್ಯತೆ ಇದೆ ಎನ್ನುತ್ತಾರೆ. ಕೋಡಿಕೊಪ್ಪ ಶಾಸನವು ಕೂಡ ಈತನ ಹೆಸರಿನ ಬಗ್ಗೆ ಚರ್ಚಿಸುತ್ತದೆ.

ಮೊಲ್ಲೇಶ್ವರ(೧೧೨೦), ಮೂಲಬ್ರಹ್ಮೇಶ್ವರ/ಬ್ರಹ್ಮೇಶ್ವರ(೧೧೪೪) ಹೀಗೆ ಎರಡು ದೇವತೆಗಳಿದ್ದು, ಕಿರುನರೆಯಂಗಲ್ಲು > ಕಿರುಗಲ್ಲು > ಕರುಗಲ್ಲು ಬ್ರಹ್ಮೇಶ್ವರ > ಬೊಮ್ಮಯ್ಯ ಆಗಿರುವ ಸಾಧ್ಯತೆ ಇದೆ.

ತಂದೆ ತಾಯಿ ಇಟ್ಟ ಹೆಸರು ಕರುಗಲ್ಲ ಬೊಮ್ಮಯ್ಯ, ಮೊಲ್ಲೆಬೊಮ್ಮಯ್ಯ ಎಂಬುದು ಅನ್ವರ್ಥಕನಾಮವಾಗಿದೆ.

**ಮೊಲ್ಲೆಬೊಮ್ಮಯ್ಯನ ಸ್ವಭಾವ**

ಕಲ್ಯಾಣ ಕ್ರಾಂತಿಯಲ್ಲಿ ನೇರವಾಗಿ ಪಾಲ್ಗೊಂಡ ಮೊಲ್ಲೆಬೊಮ್ಮಯ್ಯನನ್ನು ಕಾವ್ಯಗಳು ಭಿನ್ನಭಿನ್ನವಾಗಿ ಕರೆದಿವೆ. ಪಾಲ್ಕುರಿಕೆ ಸೋಮನಾಥ 'ಅತಿವೀರಭಕ್ತಸರ್ವಸ್ವ', ಷಡಕ್ಷರ 'ಮಲ್ಲಿ ಬೊಮ್ಮರೆಂಬ ಮಹಾತ್ಮರ್' ಚನ್ನಪ್ಪ ಕವಿ 'ಮೊಲ್ಲಿಬೊಮ್ಮಿ ತಂದೆ', ಧೂಪದ ರಾಚೇಶ 'ಇಂದುಶೇಖರನ ಶರಣ', 'ಮದನಾರಿಯ ಶಿಶು', 'ಕಲ್ಲೇಶನ ಶಿಶು' ಇತ್ಯಾದಿಯಾಗಿ ವರ್ಣಿಸಲಾಗಿದೆ. ಕಾವ್ಯದಲ್ಲೆಲ್ಲ ಮೊಲ್ಲೆಬೊಮ್ಮಯ್ಯನ ರೂಪ, ವ್ಯಕ್ತಿತ್ವವನ್ನು ವಿಶಿಷ್ಟವಾಗಿ ಚಿತ್ರಿಸಲಾಗಿದೆ. ಕಾವ್ಯದ ನಾಯಕ ಶೃಂಗಾರಪ್ರಿಯನಾಗಿದ್ದಾನೆ. ಸೌಂದರ್ಯಪ್ರಜ್ಞೆಯುಳ್ಳವನಾಗಿದ್ದಾನೆ. ಹಾಗಾಗಿಯೇ ಕಾಮರಾಜನ ಮಕ್ಕಳಲ್ಲೇ ಅತಿಸುಂದರಿಯಾದ ಪಂಪಾಂಬಿಕೆಯನ್ನು ಮದುವೆಯಾಗುತ್ತಾನೆ. ಹಾಗೆಯೇ ಪೂಜೆಗೆ ಬಳಸುವ ಹೂ 'ಮಲ್ಲಿಗೆ' ನಮ್ಮ ಪರಂಪರೆಯಲ್ಲಿ 'ಮಲ್ಲಿಗೆ'ಗೆ ವಿಶೇಷ ಪ್ರಾಶಸ್ತ್ಯವಿದೆ. ಮದುವೆಯ ಸಂದರ್ಭ ಹಾಗೂ ನಂತರದ ಆಚರಣೆಗಳಲ್ಲೆಲ್ಲ ಮಲ್ಲಿಗೆ ಹೂವಿಗೆ ಪ್ರಾಶಸ್ತ್ಯವಿದೆ. ಹೀಗೆ ಇಲ್ಲಿಯ ಕಾವ್ಯ ನಾಯಕನೂ ಮಲ್ಲಿಗೆ ಹೂವಿಗೆ ಪ್ರಾಶಸ್ತ್ಯ ನೀಡುತ್ತಾನೆ. ಕವಿಯು 'ಕಾಮನೃಪ ಬೊಮ್ಮಯ್ಯ' ಎಂದು ಹೇಳಿದ್ದಾನೆ. ಹೀಗಾಗಿ ಇಲ್ಲಿಯ ಕಾವ್ಯನಾಯಕ 'ರಸಿಕ'ನಾಗಿದ್ದಾನೆ. ಇತನನ್ನು ರಸಿಕನನ್ನಾಗಿ ಚಿತ್ರಿಸಿದ ಕವಿಯು 'ರಸಿಕ ಕವಿಯೇ' ಆಗಿದ್ದಾನೆ.

**ಕಾಲ**

ಹಲವಾರು ಕನ್ನಡ ಕವಿಗಳ ಕಾಲ ನಿರ್ಣಯದ ವಿಷಯ ಕವಿಚರಿತೆಯಲ್ಲಿ ಚರ್ಚೆಯಾಗಿಯೇ ಉಳಿದಿದೆ. ಇದಕ್ಕೆ ಮುಖ್ಯ ಕಾರಣ ಕವಿಗಳೇ ಎನ್ನಬಹುದು. ಶರಣರ ಬಾಳನ್ನೆ ವಸ್ತುವಾಗಿಸಿಕೊಂಡ ಕವಿ ಎಲ್ಲೂ ತನ್ನ ಕಾಲವನ್ನು, ತನ್ನ ಕಾವ್ಯ ನಾಯಕನ ಕಾಲದ ಬಗ್ಗೆ ಮಾಹಿತಿಯನ್ನು ನೀಡಿಲ್ಲ. ಹಾಗೆಯೇ ಕವಿ ತನ್ನ ತಂದೆ ತಾಯಿಯ ವಿಚಾರವಾಗಿಯೂ ಮೌನವಹಿಸಿದ್ದಾನೆ.

ವೈಚಾರಿಕ ಚಳುವಳಿಯಲ್ಲಿ ನೇರವಾಗಿ ಭಾಗಿವಹಿಸಿ ಅರಸನ ಕೊಲೆಯಂಥ ಮಹತ್ಕಾರ್ಯ ಕೈಗೊಳ್ಳುವ ಮೊಲ್ಲೆಬೊಮ್ಮಯ್ಯ ಬದುಕಿದ ಕಾಲ ಯಾವುದು? ಬಿಜ್ಜಳ ಕೊಲೆಯಾದದ್ದು ಎಂದು? ಕಲ್ಲೂರಿನಿಂದ ಕಲ್ಯಾಣಕ್ಕೆ ಪ್ರವೇಶವಾದದ್ದಾದರೂ ಹೇಗೆ ಎಂಬ ವಿಚಾರಗಳ ಪರಿಶೀಲನೆ ಪ್ರಸ್ತುತವಾದುದು. ಕಾವ್ಯಗಳು ಚರಿತ್ರೆ ನಿರ್ಮಾಣಕ್ಕೆ ಹೀಗೆ ಸಹಕಾರಿಯಾಗುತ್ತವೆಯೋ, ಹಾಗೆಯೇ ಶಾಸನಗಳು ಕೂಡ ಚರಿತ್ರೆಯನ್ನು ಕಟ್ಟಲು ಸಹಕರಿಸುತ್ತವೆ. ರಾಜಕೀಯ ಕ್ಷೇತ್ರದ ಪ್ರಮುಖ ವ್ಯಕ್ತಿಗಳಾದ ಬಿಜ್ಜಳನ (ಕ್ರಿ.ಶ.ಸು ೧೧೩೦-ಕ್ರಿ.ಶ.ಸು ೧೧೬೭) ಬಸವ, ಮೊಲ್ಲೆಬೊಮ್ಮಯ್ಯ ಸಮಕಾಲೀನರು.[೩] ಶರಣ ಚಾಳುಕ್ಯ ಭೀಮ, ಬಿಜ್ಜಳ, ಬಸವಣ್ಣ, ಚೆನ್ನಬಸವಣ್ಣ, ಗಣಾಧಿಕಾರಿ ಸೊಡ್ಡಳ ಬಾಚರಸ, ಸೈನ್ಯ ವ್ಯವಸ್ಥೆಯ ಜಗದೇವ-ಮಲ್ಲಿಬೊಮ್ಮಯ್ಯರೆಲ್ಲರೂ ಸಮಕಾಲೀರೆಂದು"[೪] ಗುರುತಿಸಿದ್ದಾರೆ. ಕವಿ ಹಾಗೂ ಕಾವ್ಯ, ಕಾವ್ಯ ನಾಯಕನ ವಿಚಾರವಾಗಿ ಮೌನವಹಿಸಿದ ಕಾರಣ ಶಾಸನಗಳ ಮೊರೆ ಹೋಗುವ ಅಗತ್ಯವಿದೆ.

**ಕೋಡಿಕೊಪ್ಪದ ಶಾಸನಗಳು**

ಮೊಲ್ಲೆಬೊಮ್ಮಯ್ಯನ ಕಾಲ ಗುರುತಿಸಲು ಸಹಾಯಕಾರಿಯಾಗುತ್ತವೆ. ಅವನ್ನು ಇಲ್ಲಿ ಪರಿಶೀಲಿಸುವ ಅಗತ್ಯವಿದೆ.

**೧೧೨೧ರ ಶಾಸನ**

ಮೊಲ್ಲೇಶ್ವರ ದೇವರಿಗೆ ಮೊಲ್ಲೆಬೊಮ್ಮಯ್ಯನು ೧೨ ಮತ್ತರು ಭೂಮಿ ನೀಡಿದುದನ್ನು ತಿಳಿಸುತ್ತದೆ. ಈ ಶಾಸನದ ಕಾಲದಲ್ಲಿ ಅವನ ವಯಸ್ಸು ೨೦ ಎಂದಿಟ್ಟುಕೊಂಡರೆ, ಮೇಲಿನ ಕೋಡಿಕೊಪ್ಪ ಶಾಸನದ ಕಾಲಕ್ಕೆ ಅವನಿಗೆ ೪೪ ವರುಷ, ಬಿಜ್ಜಳನ ಕೊಲೆಯ ಕಾಲಕ್ಕೆ (ಕ್ರಿ.ಶ.೧೧೬೮) ೬೮ ವರ್ಷ ಇರಬೇಕೆಂದು ಊಹಿಸಲಾಗಿದೆ. ಅವನು ಅನಂತರ ಕ್ರಿ.ಶ.೧೧೮೬ರ ವರೆಗೆ ಅಂದರೆ ತನ್ನ ೮೬ ವರ್ಷದವರೆಗೆ ಬದುಕಿದ್ದನೆಂದು ಕಲ್ಲೂರು ಶಾಸನದಿಂದ ವಿಧಿತವಾಗುತ್ತದೆ[೫] ಎನ್ನುತ್ತಾರೆ.

**೧೧೪೪ರ ಶಾಸನ**

ಮೂಲಸ್ಥಾನ ಬ್ರಹ್ಮೇಶ್ವರ ದೇವರಿಗಾಗಿ ಉಗುರು ಮುನ್ನೂರ್ವರು ತಂಬುಲಿಗ ಸಾಸಿರ್ವರು ವಾಮಶಕ್ತಿ ಬ್ರತೀಶ್ವರನಿಗೆ ದಾನ ನೀಡಿದವರೆಂದು, ಮೊಲ್ಲೆ ಬೊಮ್ಮಯ್ಯ ಉಮ್ಮಚಗಿಯ ಮಹಾಜನರಿಂದ ೬ ಮತ್ತರು ಭೂಮಿ ಬರೀದಿಸಿ ದೇವರಿಗೆ ದಾನ ನೀಡಿದನೆಂದು ತಿಳಿಯುತ್ತದೆ.

**ಕಲ್ಲೂರಿನ ಶಾಸನಗಳು**

ಮೊಲ್ಲೆ ಬೊಮ್ಮಯ್ಯನ ಕಾಲ ನಿರ್ಧರಿಸಲು ಸಹಕಾರಿಯಾಗಿವೆ.

**೧೧೫೪ರ ಶಾಸನ**

ಕಲ್ಲೂರಿಗೆ ಬಂದು ದೇವತೆಗೆ ವೀಣೆ ನುಡಿಸುವ ಕಾಯಕದಲ್ಲಿ ನಿರತ ಬೊಮ್ಮಯ್ಯನನ್ನು ಭಕ್ತಿಯಿಂದ ಕಂಡವನು, ದೇವರಿಗೆ ದತ್ತಿ ನೀಡಿ 'ಶಾಸನವ ಬರೆಸಿದವನು' ಯಲಬುರುಗಿಯ ಚಾವುಂಡನೆಂದು ಕಾವ್ಯ ಹೇಳುತ್ತದೆ.'ಚೌಂಡರಸದೇವನರ್ದ್ಧಾಂಗಿ ಮಹದೇವಿಯರು ಕಲ್ಲೂರನಾಳುತ್ತ ಶ್ರೀ ಸ್ವಯಂಭು ಕಲಿದೇವ ಸ್ವಾಮಿಯ ಪಾದಾರಾಧಕಂ ಮೊಲ್ಲೆಯ ಬೊಮ್ಮಯ್ಯಂಗೆ ದಾನ ನೀಡಿದ ವಿಷಯ ಬರುತ್ತದೆ.

**೧೧೮೬ರ ಶಾಸನ**

ವೀರಬಿಜ್ಜಳದೇವರಸರು ಕಲ್ಲೂರ ಶ್ರೀ ಸ್ವಯಂಭು ಕಲಿದೇವ ಸ್ವಾಮಿಯ ಪಾದಾರಧಕಂ ಮೊಲ್ಲೆಯ ಬೊಮ್ಮಯ್ಯಂಗೆ ಪ್ರಥಮವೃತ್ತಿಯಾಗಿ ಗಣಮಠಕ್ಕೆ ದಾನ ನೀಡಿದ ವಿಷಯ ಬರುತ್ತದೆ. ಇದರಿಂದ ಮೊಲ್ಲೆಬೊಮ್ಮಯ್ಯನ ವಿಷಯದಲ್ಲಿ ಸಿಂಧ ಅರಸುಮನೆತನಕ್ಕೆ ಇದ್ದ ಗೌರವ ಸ್ಪಷ್ಟವಾಗುತ್ತದೆ. ಹಾಗೆಯೇ ಕವಿ 'ಧೂಪದ ರಾಚೇಶ'ನು ಸಿಂಧವಂಶದ ಕಾಮರಾಜನ ಮಗಳು ಪಂಪಾಯಿಯನ್ನು ಮೊಲ್ಲೆಬೊಮ್ಮಯ್ಯ ವಿವಾಹವಾದ ಸಂದರ್ಭವನ್ನು ಪ್ರಸ್ತಾಪಿಸಿದ್ದಾನೆ. ಅರಸನ ಕಾಲ ಕ್ರಿ.ಶ.ಸು.೧೧೪೪ ಎಂಬುದು ಚಾರಿತ್ರಿಕ ದಾಖಲೆಯಾಗಿದೆ. ಹೀಗೆ ಎಲ್ಲ ಅಂಶಗಳು ಮೊಲ್ಲೆಬೊಮ್ಮಯ್ಯ, ಬಸವಣ್ಣ, ಬಿಜ್ಜಳ, ಸಮಕಾಲೀನರಾಗಿ ಬದುಕಿಬಾಳಿದವರು, ಮೊಲ್ಲೆಬೊಮ್ಮಯ್ಯನ ಕಾಲ ೧೧೬೮ರ ಎಂದು ಬಿಜ್ಜಳನ ಕೊಲೆಯನ್ನು ಎಲ್ಲ ಇತಿಹಾಸ ಪುಸ್ತಕಗಳಲ್ಲಿ ೧೧೬೮[೬] ಎಂದು ದಾಖಲಿಸಲಾಗಿದೆ.

ಹೀಗಾಗಿ ಕಾವ್ಯದ ನಾಯಕನಾದ ಮೊಲ್ಲೆಬೊಮ್ಮಯ್ಯನು ಕ್ರಿ.ಶ.ಸು. ೧೧೨೧ರ ಕಾಲಕ್ಕೆ ೨೦ ವರ್ಷದವನಿದ್ದು ೧೧೬೮ರಲ್ಲಿ 'ಬಿಜ್ಜಳಕೊಲೆ'ಯಂಥ ಮಹತ್ಕಾರ್ಯದಲ್ಲಿ ಪಾಲ್ಗೊಂಡು ಕ್ರಿ.ಶ.ಸು.೧೧೮೬ರ ವರೆಗೆ ಅಂದರೆ ತನ್ನ ೮೬ ವರ್ಷದವರೆಗೆ ಬದುಕಿ ಬಾಳಿದನೆಂಬುದು ಸ್ಪಷ್ಟವಾಗುತ್ತದೆ.

**ಸ್ಥಳ**

ಕಲ್ಯಾಣದ ಕಿಡಿಯನ್ನು ಬಿಜ್ಜಳನ ಕೊಲೆಯಿಂದ ಸ್ಫೋಟಗೊಳಿಸಿದ ಜಗದೇವ ಹಾಗೂ ಮೊಲ್ಲೆಬೊಮ್ಮಯ್ಯರ ಊರು ಯಾವುದು? ಜಗದೇವ ಎಲ್ಲಿಯವನು ಎಂಬ ಪ್ರಶ್ನೆ ಏಳುತ್ತದೆ.

ವೀರಶೈವ ಕಾವ್ಯಗಳು, ಇವರ ಊರಿನ ಬಗೆಗೆ ಮೌನವನ್ನು ವಹಿಸಿವೆ. ಆದರೆ 'ಮೊಲ್ಲೆಬೊಮ್ಮಯ್ಯ'ನ ಕಾವ್ಯ ಮಾತ್ರ ಸ್ಪಷ್ಟವಾಗಿ ಮೊಲ್ಲೆಬೊಮ್ಮಯ್ಯನ ಊರಿನ ವಿಚಾರ ತಿಳಿಸುತ್ತದೆ.

'ಶಿವನು ವೀರಗಣೇಶ್ವರನನರ
ಭುವಿಗೆ ಕಳುಪಲು ಬಂದು ಕಲ್ಪುರ
ಧವನ ವರದಿಂದೊಗೆದ ರಾವಣಿಕೆಯೆಂಬ
ಪುರದಲ್ಲಿ (೨-೧)

ಹೀಗೆ ಸ್ಪಷ್ಟವಾಗಿ ರಾಯಚೂರು ಜಿಲ್ಲೆಯ ಯಲಬುರ್ಗಿ ತಾಲ್ಲೂಕಿನ ರಾವಣಿಕೆ ಈತ ಜನಿಸಿದ ಊರಾಗಿದೆ. ಮೊಲ್ಲೆಬೊಮ್ಮಯ್ಯನ ಬಾಲ್ಯ ಕಳೆದದ್ದು ಕಲ್ಲೂರಿನಲ್ಲಿ, ಹೀಗೆ ಮೊಲ್ಲೆಬೊಮ್ಮಯ್ಯನ ವಿವಿಧ ಚಟುವಟಿಕೆಗಳ ಆಡುಂಬೊಲವಾಗಿದ್ದ ಕಲ್ಲೂರು, ರ್‍ಯಾವಣಿಕೆ, ನರೇಗಲ್ಲು, ಕಿರುನರೆಯಂಗಲು ಮೊದಲಾದ ಊರುಗಳೆಲ್ಲ ಹತ್ತಿರವಿವೆ. ಪೂರ್ವಕಾಲದಲ್ಲಿ ಇವೆಲ್ಲ 'ನರೆಯಂಗಲ್ಲು ಪನ್ನೆರಡರ ಆಡಳಿತಕ್ಕೊಳಪಟ್ಟಿದ್ದವು'[೭] ಎಂಬ ವಿಚಾರ ಶಾಸನದಿಂದ ಸ್ಪಷ್ಟವಾಗುತ್ತವೆ.

ಇಂದಿಗೂ ಕೂಡ ರ್‍ಯಾವಣಿಕೆ, ಕೋಡಿಕೊಪ್ಪ ಕಲ್ಲೂರುಗಳು ಪ್ರಸ್ತುತವಿದ್ದು, ಹತ್ತಿರದಲ್ಲೇ ಇವೆ. ಅಷ್ಟೇ ಅಲ್ಲದೆ ಈ ಎಲ್ಲಾ ಊರುಗಳ ಕಲ್ಲೇಶ ದೇವರ ಗುಡಿಯ ಅಕ್ಕಪಕ್ಕದಲ್ಲಿ ೨ ಕಲ್ಲುಗಳಿದ್ದು, ಅವನ್ನು ಸ್ಥಳೀಯರು ಜಗದೇವ ಮತ್ತು ಮೊಲ್ಲೆಬೊಮ್ಮಯ್ಯ ಎಂದು ಗುರುತಿಸುತ್ತಾರೆ.

ಕಲ್ಲಪ್ಪನ ಕಟ್ಟೆಯ ಮೇಲೆ ಎರಡು ಬಸವಣ್ಣಗಳು ಇದ್ದು, ಕಲ್ಯಾಣಕ್ರಾಂತಿಯಾದಾಗ ಬಿಜ್ಜಳನನ್ನು ಕೊಂದು ಈ ಬಸವಣ್ಣನನ್ನು ಏರಿ ತಮ್ಮ ವಿಜಯದ ಹರ್ಷವನ್ನು ಪ್ರಕಟಿಸುತ್ತಾ ಬಂದರು. ಹಾಗೇ ಬರುವಾಗ ದಣಿದು ಮಾರ್ಗಮಧ್ಯದಲ್ಲಿ ರಾವಣಿಕೆಯ ಸಮೀಪ ಕುಳಿತಿದ್ದರೆಂದು ಒಂದು ಕಟ್ಟೆಯ ಮುಂದೆ ಎರಡು ಚಿಕ್ಕ ಕಲ್ಲು ಬಂಡೆಗಳಿರುವ ಸ್ಥಳವನ್ನು ತೋರುತ್ತಾರೆ.[೮] ಇದೇ ಅಂಶವನ್ನು ಗಣಿಸಿ ಇಂದಿಗೂ ಕೂಡ ಈ ಭಾಗದಲ್ಲಿ ಶ್ರಾವಣ ಮಾಸದಲ್ಲಿ ಬಸವಣ್ಣನನ್ನು ಕರೆದುಕೊಳ್ಳುವ ಹಬ್ಬವನ್ನು ಆಚರಿಸುತ್ತಾರೆ.

ಕಲ್ಲಪ್ಪನ ಗುಡಿನ ಹಿಂದೆ ಇರುವ ಸಮಾಧಿ ಮೊಲ್ಲೆಬೊಮ್ಮಯ್ಯನದೆ ಎನ್ನುತ್ತಾರೆ. ಸ್ಥಳೀಯರು ಅಲ್ಲದೆ ಜಗದೇವ, ಮೊಲ್ಲೆಬೊಮ್ಮಯ್ಯರು ಬಿಜ್ಜಳನ ಕೊಲೆ ಸಂದರ್ಭದಲ್ಲಿ ಉಪಯೋಗಿಸಿದ 'ಖಡ್ಗ'ಗಳು ಕೂಡ ರ್‍ಯಾವಣಿಕೆಯಲ್ಲಿ ದೊರೆಯುತ್ತವೆ. ಹೀಗಾಗಿ 'ರ್‍ಯಾವಣಿಕೆ, ಕಲ್ಲೂರು, ಕೋಡಿಕೊಪ್ಪ' ಮೊಲ್ಲೆಬೊಮ್ಮಯ್ಯನ

ಚಟುವಟಿಕೆಗೆಲ್ಲ ಕೇಂದ್ರಸ್ಥಾನವಾಗಿದ್ದವೆಂಬುದು ಸತ್ಯ. ಪ್ರಾಚೀನ ಕಾವ್ಯಗಳು ಜಗದೇವನ ಊರು ಕಲ್ಯಾಣವೆಂದು, ಕಲ್ಯಾಣಕ್ರಾಂತಿಯ ಸಮಯಕ್ಕೆ ಮೊಲ್ಲೆಬೊಮ್ಮಯ್ಯ ಕಲ್ಯಾಣಕ್ಕೆ ಬಂದು ಸೇರಿದನೆಂದು ಹೇಳಿವೆ. ಪ್ರಸ್ತುತ ಮೊಲ್ಲೆಬೊಮ್ಮಯ್ಯನಕಾವ್ಯವೂ ಈ ವಿಷಯವನ್ನೆ ಸಮರ್ಥಿಸುತ್ತದೆ. ಶರಣರ ಎಳೆಹೂಟೆ ಪ್ರಸಂಗದ ಬಳಿಕ, ಕಲಿದೇವನ ಆಜ್ಞೆಯಂತೆ ಬಿಜ್ಜಳನ ಹತ್ಯೆಗಾಗಿಯೇ ಕಲ್ಲೂರಿನಿಂದ ಕಲ್ಯಾಣಕ್ಕೆ ಹೋದನು. ಬಿಜ್ಜಳನ ಕೊಲೆಗೆ ತಾನು ಸಹಾಯಕನಾಗುವೆನು. ಎಂದಾಗ ಜಗದೇವನು

ಬೆಡೆಮೆಲೆ ಬೊಮ್ಮಯ್ಯ ನೀನು ಭಕ್ತರ ಕೊಲೆಯ

ನೋಡಿದಾತನುಮಲ್ತು ಮೇಣು ಪುರದೊಳಗಿರ್ದು

ನಾಡರಿಯೆ ಕೇಳಿದಾತನುಮಲ್ತು ನೋಡಿ ಪಾತಳಿಕ್ಕೆ ಗುರಿಯಾದನಲ್ತು.

ನೋಡೆ ಜಗದೇವನೊಳು ಶರಣರ್ಗಳಾಜ್ಞೆಯಂ

ಕೂಡೆ ತಾಳಿದನಲ್ತು ತಾಳ್ದು ತಪ್ಪಿದನಲ್ತು.

ಆಡಿದುದ ನೊಡರ್ಚ ದರಿಂತಾಯಿತೀತಂಗೆ ಸಲ್ಲ ನಿಮಗೆನಲೆಂದನು. (೧೭-೨೫)

ಎಂದು ನುಡಿಯುವ ಮಾತಿನಿಂದಾಗಿ ಮೊಲ್ಲೆಬೊಮ್ಮಯ್ಯ ಕ್ರಾಂತಿಯ ಕಾಲಕ್ಕೆ ಬೇರೆಡೆಯಿಂದ ಬಂದು ಸೇರಿದನೆಂಬ ಅಂಶ ಸ್ಪಷ್ಟತೆಯನ್ನು ಪಡೆಯುತ್ತದೆ. ಎಳೆಹೂಟೆ ಪ್ರಸಂಗದ ನಂತರ, ಹೋಗಿ ಕಲ್ಯಾಣದಲ್ಲಿ ಆತ ಕಾಲ ಕಳೆದದ್ದು ೩ ತಿಂಗಳು ಮಾತ್ರ. ಈ ಅವಧಿಯಲ್ಲಿಯೇ ಬಿಜ್ಜಳನ ಕೊಲೆಯಾಯ್ತೆಂದು ಸ್ಪಷ್ಟವಾಗುತ್ತದೆ.

## ಆರಾಧ್ಯ ದೈವ

ಒಬ್ಬ ವ್ಯಕ್ತಿಗೆ ಹೆಸರಿಡುವ ಸಂದರ್ಭದಲ್ಲಿ ತನ್ನ ಗುರು ಹಿರಿಯರು, ತಂದೆ, ತಾಯಿ, ಸಮಾಜ, ಹಾಗೆಯೇ ಮನೆದೈವ, ಕುಲದೈವ, ಆರಾಧ್ಯದೈವ, ಪ್ರಭಾವೀದೇವತೆ ನಾಮವನ್ನಿಡುವ ಸಂಗತಿ ಸಹಜವಾದುದು. ಹಾಗೆಯೇ ಮನುಷ್ಯನಿಗೆ ಕಷ್ಟ ಬಂದಾಗ, ಕಂಡ ಕಂಡ ದೇವರಿಗೆ ಕೈಮುಗಿದು ಹರಕೆ ಹೊರುವುದು ಮನುಷ್ಯ ಸಹಜ ಗುಣ ಇಂಥ ಗುಣವನ್ನು ಕವಿ 'ಧೂಪದ ರಾಚೇಶ' ವಿರಚಿತ 'ಮೊಲ್ಲೆಬೊಮ್ಮಯ್ಯ'ಗಳ ಕಾವ್ಯದ ಬೊಮ್ಮಗೌಡ ಹಾಗೂ ಕಲ್ಲಮ್ಮರಲ್ಲಿ ಕಾಣುತ್ತೇವೆ. ಕಾವ್ಯವೇ ಇವರ ಆರಾಧ್ಯದೈವ 'ಕಲ್ಲೂರಿನ ಕಲ್ಲಿನಾಥನೆಂದೂ, ಹಾಗೂ 'ಕರುಗಲ್ಲು ಬೊಮ್ಮಯ್ಯ' ಮನೆದೈವ ಎಂಬ ಮಾತನ್ನು ತಿಳಿಸುತ್ತದೆ. ಕವಿ 'ಧೂಪದ ರಾಚೇಶನು' ಬೊಮ್ಮಗೌಡನ ಬಾಯಿಂದಲೇ ತಮ್ಮ ಮನೆದೈವ ಯಾವುದೆಂದು ಹೇಳಿಸುತ್ತಾನೆ.

'ಎಮ್ಮಯ ಮನೆದೈವವು ಕರುಗಲ್ಲ ಬ್ರಹ್ಮನಲ್ಲದೆ ಬೇರೆ ದೈವವೆಂದರಸಲುಂಟೇ ಎತ್ತಣಾ ಕಲ್ಲಮ'(೨-೫೬) ಎನ್ನುತ್ತಾನೆ. ಕಲ್ಬುರಕೆ ಪೂರ್ವದೆಸೆಯಲರೆ ಯೋಜನದಲಿಹುದು ಉರೆ ರಾವಣಿಕೆಯೆಂಬಪುರ ಆ ಪುರಕೆ ಪ್ರಭುವಾದ ಬೊಮ್ಮಗೌಡ, ಕಲ್ಲಮ ದಂಪತಿಗೆ ಸಕಲ ಸಿರಿ ಸಂಪತ್ತಿದ್ದು, ಒಂದು ಚಿಂತೆ

ಕಾಡಿತ್ತು ಮಕ್ಕಳಿಲ್ಲವೆಂದು. ತಮ್ಮ ಆರಾಧ್ಯದೈವವಾದ ಕಲ್ಲೂರ ಕಲ್ಲನಾಥನಿಗೆ ನನಗೆ ಪುತ್ರ ಜನಿಸಿದರೆ 'ಬೇಡ್ಕೊಂಡಳಭವನೆ ಸುತನ ಕೊಡೆ ನಿಮ್ಮಯಾ ಹೆಸರುಗರೆವೆನೆಂದು ಹರಕೆಹೊರುತ್ತಾಳೆ.'(೨–೫೫) ಕಾವ್ಯದಂತೆ ಶಾಸನಗಳೂ ಕೂಡ ಮೊಲ್ಲೆಬೊಮ್ಮಯ್ಯನ ಆರಾಧ್ಯದೈವ ಹಾಗೂ ಮನೆದೈವದ ವಿಚಾರವನ್ನು ಸ್ಪಷ್ಟೀಕರಿಸುತ್ತವೆ. ಹೀಗೆ ಕುಲದೈವವಾದ ಕರುಗಲ್ಲು ಎಂಬುದೇ ಕಿರುನರೆಯಂಗಲ್ಲು > ಕಿರಗಲ್ಲು > ಕರುಗಲ್ಲು, ಬ್ರಹ್ಮೇಶ್ವರ > ಬೊಮ್ಮಯ್ಯ ಆಗಿರುವ ಸಾಧ್ಯತೆ ಇದೆ. ಈಗಲೂ ಕೂಡ ನಾವು ರ್‍ಯಾವಣಿಕೆ, ಕೋಡಿಕೊಪ್ಪದಲ್ಲೆಲ್ಲ ಮೂಲಬ್ರಹ್ಮದೇವರ ದೇವಸ್ಥಾನವಿರುವದನ್ನು ಕಾಣುತ್ತೇವೆ.

**ತಂದೆ ತಾಯಿ**

ಚಾರಿತ್ರಿಕ ವ್ಯಕ್ತಿಯಾದ ಮೊಲ್ಲೆಬೊಮ್ಮಯ್ಯನ ತಂದೆ–ತಾಯಿಯ ವಿಚಾರವಾಗಿ ವೀರಶೈವ ಕಾವ್ಯಗಳು ಚಕಾರವೆತ್ತಿಲ್ಲ. ಪ್ರತಿಯೊಬ್ಬ ವ್ಯಕ್ತಿಯ ಜನನಕ್ಕೆ ಕಾರಣ ತಂದೆ ತಾಯಿಗಳು. ಆದರೆ ಕವಿಗಳ ಧಾರ್ಮಿಕ ಮನೋಭಾದಿಂದಾಗಿಯೋ ಅಥವಾ ಜನಸಾಮಾನ್ಯರ ಮೂಢತನದಿಂದಾಗಿಯೋ ನಮಗೆ ಕವಿ, ಕೃತಿ, ಸ್ಥಳ, ಕಾಲ, ತಂದೆತಾಯಿಗಳ ಬಗ್ಗೆ ವಿಷಯ ದೊರಕದು. ಆದರೆ ಈ ಮೊಲ್ಲೆಬೊಮ್ಮಯ್ಯನ ಕಾವ್ಯ ತಂದೆ–ತಾಯಿ ಕುರಿತು ಯಾವುದೇ ಗೊಂದಲಗಳಿಗೆ ಎಡೆಮಾಡಿಕೊಡದೇ ಕಾವ್ಯವೇ ಸ್ಪಷ್ಟವಾಗಿ ಹೇಳುತ್ತದೆ.

"ಕಲ್ಬುರಕೆ ಪೂರ್ವದ ದೆಸೆಯಲರೆ ಯೋಜನದಲಿಹುದು
ಉರೆ ರಾವಣಿಕೆಯೆಂಬ ಪುರಮದಕೆ ಪ್ರಭುವಾಗಿ
ಇಹ ಬೊಮ್ಮಗೌಡನೆಂದು
ಇರಲಾತನರ್ಧಾಂಗಿ ಕಲ್ಲಮ್ಮನೆಂದಿಹಳ"(೨–೧೩)

ಎಂದು ಸ್ಪಷ್ಟವಾಗಿ ಹೇಳುತ್ತದೆ. ರಾವಣಕೆ ಪುರದ ಪ್ರಭು ಬೊಮ್ಮಗೌಡ, ಇವನ ಅಧಾಂಗಿ ಕಲ್ಲಮ್ಮ. ಇವರಿಗೆ ಕಲ್ಲೂರ ಕಲ್ಲಿನಾಥನ ಕೃಪೆಯಿಂದ ಜನಿಸಿದ ಮಗನೇ ಮೊಲ್ಲೆಬೊಮ್ಮಯ್ಯ ಎಂಬ ವಿಚಾರಗಳು ಸ್ಪಷ್ಟವಾಗುತ್ತವೆ.

**ಬಾಲ್ಯ**

ಮನುಷ್ಯ ಜೀನವದಲ್ಲಿ ಬಾಲ್ಯ, ಯೌವ್ವನ, ಮುಪ್ಪು ಸಹಜವಾದವು. ಕೃಷ್ಣ ದುಷ್ಟ ಶಕ್ತಿಯನ್ನು ಸಂಹಾರ ಮಾಡಿ ಲೀಲೆಯನ್ನು ಮೆರೆದದ್ದು ಬಾಲ್ಯದಲ್ಲಿಯೇ. ಹಾಗೆಯೇ ೧೨ನೇ ಶತಮಾನದ ಬಸವಣ್ಣ ಉಪನಯನವನ್ನು ತೊರೆದು, ಅಕ್ಕ ನಾಗಲಾಂಬಿಕೆಗೂ ಉಪನಯನ ಏಕಿಲ್ಲ? ಎಂದು ಧಾರ್ಮಿಕ ಕಟ್ಟಳೆಯನ್ನು ಮುರಿದದ್ದು, ಇವೆಲ್ಲ ಅಸಾಧಾರಣವಾದ ವ್ಯಕ್ತಿತ್ವದ ಕುರುಹುಗಳು. ಇಂಥ ಅಸಾಧಾರಣವಾದ ವ್ಯಕ್ತಿತ್ವವನ್ನು ನಾವು ಮೊಲ್ಲೆಬೊಮ್ಮಯ್ಯನಲ್ಲಿ ಕಾಣುತ್ತೇವೆ.

ಕವಿ ಧೂಪದ ರಾಚೇಶ ಮೊಲ್ಲೆಬೊಮ್ಮಯ್ಯನ ಜೀವನದ ಪದರುಗಳನ್ನು ಬಿಚ್ಚುವಾಗ ಹಲವಾರು ಪ್ರಾಚೀನ ಕವಿಗಳ ಕಾವ್ಯ ಗುಣವನ್ನು ಅನುಸರಿಸಿದ್ದಾನೆ. ಕಲ್ಲೂರಿಗೆ ಅರ್ಧಗಾವುದ ದೂರದಲ್ಲಿ

ರಾವಣಿಕೆಯೆಂಬ ಗ್ರಾಮ. ಆ ಗ್ರಾಮದ ಪ್ರಭು ಬೊಮ್ಮಗೌಡ, ಇವನ ಅರ್ಧಾಂಗಿ ಕಲ್ಲಮ್ಮ. ಚಿಂತೆ ಎಂಬುದು ಯಾರನ್ನು ಬಿಡುವುದಿಲ್ಲ. ಅದು ಬಡವ, ಶ್ರೀಮಂತರೆನ್ನದೇ ಆವರಿಸುತ್ತದೆ. ಎಲ್ಲರಿಗೂ ಎಲ್ಲಾ ಭಾಗ್ಯ ದೊರೆಯದು. ಒಬ್ಬರಿಗೆ ಸಿರಿಸಂಪತ್ತಿನ ಚಿಂತೆಯಾದರೆ, ಇನ್ನೊಬ್ಬರಿಗೆ ಸಂತಾನದ ಚಿಂತೆ, ಮತ್ತೊಬ್ಬರಿಗೆ ಆರೋಗ್ಯದ ಚಿಂತೆ, ಹೀಗೆ ಒಂದಿಲ್ಲೊಂದು ಚಿಂತೆ ಮನುಷ್ಯನನ್ನು ಕಾಡುತ್ತಲೇ ಇರುತ್ತದೆ. ಬೊಮ್ಮಗೌಡ, ಕಲ್ಲಮ್ಮ ದಂಪತಿಗಳು ಸಿರಿಸಂಪತ್ತು, ಘನಸೌಖ್ಯ, ಸೌಂದರ್ಯ, ಶಾಂತಿಗುಣ, ಎರೆ,ದಮೆ, ಕ್ಷಮೆ, ವರವಿದ್ಯೆ, ಪೂಜೆ, ದಯ ದಾಕ್ಷಿಣ್ಯದಿಂದ ಹೀಗೆ ಸಕಲ ಸಂಪತ್ತಿನಿಂದ ಇರಲ ಒಂದು ಕೊರತೆ ಕಾಡಿತ್ತು.

ಇಂತು ಸಂತೋಷದಿಂದಿರುತ ಸತಿಪತಿಗಳತಿ
ಚಿಂತೆಯಂ ತಳೆದನಾತ್ಮಜರಿಲ್ಲ ತಮಗೆಂದು
ಎಂತು ಬಾಳ್ದಪ ಬಾಳ್ವೆಯೆಂ ಫಲವು
ಸುತರಿಲ್ಲಧರೆಗೆ ಇಹಪರಮಿಲ್ಲವು. (೨-೧೭)

ಎಂದು ಅತಿ ಚಿಂತೆಯಲ್ಲಿರಲು, ಆ ಚಿಂತೆ ಪರಿಹಾರಕ್ಕೆ ಕಲ್ಲಿನಾಥನಿಗೆ ಮೊರೆ ಹೋಗಿ ಪುತ್ರ ಜನಿಸಿದರೆ ನಿನ್ನ ಹೆಸರಿಡುವೆನೆಂದು ಹರಕೆ ಹೊರುತ್ತಾಳೆ. ಕಲ್ಲಿನಾಥನ ಕೃಪೆಯಿಂದ ಜನಿಸಿದ ಮಗನಿಗೆ ಬೊಮ್ಮಗೌಡ ಕಲ್ಲಿನಾಥನ ಹೆಸರಿಡದೇ, ತನ್ನ ಮನೆದೈವವಾದ 'ಕರುಗಲ್ಲ ಬ್ರಹ್ಮೇಶ್ವರ'ನ ಹೆಸರನ್ನು ಇಡುತ್ತಾನೆ. ಕಲ್ಲಮ್ಮ ತನ್ನ ಹರಕೆಯ ವಿಷಯವನ್ನು ತಿಳಿಸಿದಾಗ, ಬೊಮ್ಮಗೌಡ 'ಎಮ್ಮಯಾ ಮನೆದೈವವು ಕರುಗಲ್ಲ ಬ್ರಹ್ಮನಲ್ಲದೇ ಬೇರೆ ದೈವವೆಂಬುದರಸಲುಂಟೇ ಎತ್ತಣಾ ಕಲ್ಲಮ್ಮ' ಎಂದು ಅವಳ ಮಾತನ್ನು ತಿರಸ್ಕರಿಸುತ್ತಾನೆ. ಹೀಗಾಗಿ ಕಲ್ಲೂರಿನ ಕಲ್ಲಿನಾಥನಿಗೂ, ಬೊಮ್ಮೆಗೌಡನಿಗೂ ವ್ಯಾಜ್ಯೆ ಉಂಟಾಗಿ ಕಲ್ಲಿನಾಥ ಜಂಗಮರೂಪಿಯಾಗಿ ಬಂದು ಶಿಶುವನ್ನು ಕದ್ದೊಯ್ವ' ಬೊಮ್ಮಗೌಡ ಹುಡುಕಿ ತರುವ, ಮತ್ತೆ ಕಲ್ಲಿನಾಥ ಕದ್ದೊಯ್ವ ಹೀಗಾಗಿ ಮಗು ಹಗಲಿನಲ್ಲಿ ಹೆತ್ತವರ ಬಳಿ, ರಾತ್ರಿ ಕಲ್ಲೇಶನಂಘ್ರಿಯಲ್ಲಿ ಮೃದುಲತೆಯಂತೆ ಬೆಳೆಯತೊಡಗಿದ. ಹೀಗೆ ೭-೮ ವರ್ಷ ಕಳೆದವು. ಈ ಪರಿಯಲ್ಲಿ ಬಾಲಕ ಬೆಳೆಯುತ್ತಿದ್ದಂತೆ ಆತನ ಮತಿಯು ವಿಸ್ತರತೆಯನ್ನು ಪಡೆಯಿತು. ಶರಣರ ನಡುವಳಿಕೆ, ಆಚರಣೆ, ನುಡಿಯಲ್ಲಿ ಪಂಚಾಕ್ಷರಿ ಮಂತ್ರ ಪಠಿಸುವುದು, 'ಗುರು-ಲಿಂಗ - ಜಂಗಮ'ಕ್ಕೆರಗುವುದು ಹೀಗೆ ವೀರಶೈವ ಧರ್ಮ ಆಚರಣೆಯನ್ನು ಒಪ್ಪುವಷ್ಟು ಆತನ ಮನಸ್ಸು ವಿಶಾಲತೆಯನ್ನು ಪಡೆಯಲಾರಂಭಿಸಿತು.

ಮಗನ ಮನವನ್ನು ಪರಿವರ್ತನೆಗೊಳಿಸಲು ತನ್ನೂರಿಗೆ ಮಗನನ್ನು ಕರೆತಂದು, ಮನೆ, ದನ, ಕರು ಎನ್ನದೆ ಮರುಳನಂತೆ ಕಲ್ಲೇಶನ ದೇಗುಲದಲ್ಲಿ ಬಾಳ್ವದು ಸರಿಯಲ್ಲ ಕೇಳು ಮಗನೇ

"ಮನೆ ನಿನ್ನದು ಮನೆವಾರ್ತೆಯು ನಿನ್ನದು
ದನ ನಿನ್ನವು ಧನ ಧಾನ್ಯವು ನಿನ್ನವು
ಮನ ಬೇಡಿದ ವಸ್ತುವನುಣಲ ತೊಡು
ವರೆಯಿಲ್ಲವೆಂ ನಿನಗೆ ಅನಿಮಿಷ ಅಂಗನೆಯರ ಕೀಳ್ವಡಿಸುವ
ವನಿತೆಯ ನಿನಗೆ ಮದುವೆಯಂ ಮಾಡುವೆ

ಬಿನುಗು ಜಂಗಮ ಬಂದು ಕರೆದರೆ
ಪೋಗಲು ಬೇಡವೊ ಕುವರ" (೨-೩೦)

ಎಂದು ಬುದ್ಧಿ ಹೇಳುತ್ತಾನೆ. ಮಸಣಗಾಹಿ ಜಂಗಮ ಕರೆದರೆ ಹೋಗಬೇಡವೆಂದು ಹೇಳಿ, ಮಗನಿಗೆ ಅನ್ನವನ್ನಿಕ್ಕಿ ಪಶುಗಳನ್ನು ಕಾಯಲು ಹೊಲಕೆ ಕಳುಹಿಸುತ್ತಾನೆ. ದನ ಕಾಯುವ ಬೊಮ್ಮಯ್ಯನ ಪ್ರಸಂಗವು 'ಸಿದ್ಧರಾಮ ಚರಿತೆ'ಯನ್ನು ನೆನಪಿಗೆ ತರುತ್ತದೆ. ಹಾಗೂ ಬಸವಣ್ಣನವರ ಕಾಯಕದ ಕಲ್ಪನೆಯೂ ಮೂರ್ತರೂಪ ಪಡೆದದ್ದು ಕಂಡುಬರುತ್ತದೆ.

ಇತ್ತ ಕಲ್ಲೇಶ ಸಿಟ್ಟಿಗೆದ್ದು, ಪಶುಗಳನ್ನು ಅದೃಶ್ಯದಿಂದ ಮನೆಗೆ ಹೋಗುವಂತೆ ಮಾಡುತ್ತಾನೆ. ಬಾಲಕನಿಂದಲೇ ಹೊಲದ ಬೆಳೆಯನೆಲ್ಲ ಬೇರು ಸಮೇತ ಕೀಳಿಸುತ್ತಾನೆ. ಹೀಗಾಗಿ ಮನೆಗೆ ಬರದೇ, ಮಗ ಎಲ್ಲಿ ಹೋದನೋ? ಆ ಜಂಗಮನನ್ನು ಕಟ್ಟಿ ಕೊಲ್ಲುವೆನೆನುತ ಕಲ್ಲೂರಿಗೆ ಬಂದನು. ಬಾಲಕ ಯಾರ ವಶದಲ್ಲಿ ಉಳಿಯಬೇಕೆಂಬ ಜಗಳ ನಡೆದು, 'ನರೇಂಗಲ್ಲಿನ ನ್ಯಾಯಕಟ್ಟೆಯಲ್ಲಿ ನ್ಯಾಯ ನಿರ್ಣಯವಾಗಿ ಕಲ್ಲೇಶನ ವಶದಲ್ಲಿ ಬಾಲಕನಿರಬೇಕೆಂದು ನಿರ್ಧಾರವಾಗುತ್ತದೆ. ಇಂದಿಗೂ ಕೂಡ ನರೇಂಗಲ್ಲಿನಲ್ಲಿ 'ನ್ಯಾಯದ ಕಟ್ಟೆ' ಇದ್ದು ಇದೇ ವಿಚಾರವನ್ನು ಸ್ಥಳೀಯರು ವ್ಯಕ್ತಪಡಿಸುತ್ತಾರೆ. ಹೀಗೆ ಕಲ್ಲೇಶನ ವಶವಾದ ಬಾಲಕ ಕಲ್ಲಿನಾಥನ ಸೇವೆಯಲ್ಲಿ ನಿರತನಾಗುತ್ತಾನೆ. 'ಮೊಲ್ಲೆ' ಎಂಬುದು ಭಕ್ತಿಗೆ ಸಂಬಂಧಿಸಿದ ಉಪನಾಮವಾಗಿ ಸತತವಾಗಿ ಮೊಲ್ಲೆ ಹೂವಿನಿಂದ ಪೂಜೆ ಕೈಗೊಂಡ ಮೊಲ್ಲೆ ಬೊಮ್ಮಯ್ಯ ಪ್ರಾಯಕ್ಕೆ ಕಾಲಿರಿಸುತ್ತಾನೆ.

**ಮೊಲ್ಲೆಬೊಮ್ಮಯ್ಯ ಜಗದೇವರ ಸಂಬಂಧ**

ಕಲ್ಯಾಣ ಕ್ರಾಂತಿಯ ಪರಿಣಾಮದಿಂದಾಗಿ ಬಿಜ್ಜಳನ ಕೊಲೆಯಾದದ್ದು ಜಗದೇವ, ಮೊಲ್ಲೆಬೊಮ್ಮಯ್ಯರಿಂದಲೇ, ಹಾಗಾದರೆ ಜಗದೇವ ಎಲ್ಲಿಯವ? ಮೊಲ್ಲೆಬೊಮ್ಮಯ್ಯ ಎಲ್ಲಿಯವ? ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ.

'ಬೆಟ್ಟದ ನೆಲ್ಲಿಕಾಯಿ, ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯಾ' ಎಂಬಂತೆ ಕಲ್ಯಾಣದ ಜಗದೇವ ಹಾಗೂ ಕಲ್ಲೂರಿನ ಮೊಲ್ಲೆಬೊಮ್ಮಯ್ಯರಿಗೆ ಎತ್ತಣಿಂದೆತ್ತ ಸಂಬಂಧವಯ್ಯ? ಎಂಬುದಕ್ಕೆ ವೀರಶೈವ ಕಾವ್ಯಗಳು ಜಗದೇವ ಕನ್ನೇಹಳ್ಳಿ ಎಂದೂ, ಈತ ದೇಸಾಯಿ ಮನೆತನಕ್ಕೆ ಸೇರಿದನಾಗಿದ್ದು ಇವರ ಚರಿತ್ರೆ ಕ್ರಿ.ಶ.೯೫೫ರಿಂದ ಪ್ರಾರಂಭವಾಗುತ್ತದೆ.[೯] ಈ ದೇಸಾಯಿಯವರು ಕಲ್ಯಾಣ ದೊರೆ ಬಿಜ್ಜಳ ಅರಸನಿಗೆ ಆತ್ಮೀಯರಾಗಿದ್ದು, ಅವರ ಓಲಗದಲ್ಲಿ ವಿಶೇಷ ಆಮಂತ್ರಿತ ದೇಸಾಯಿರುಗಳಾಗಿದ್ದರು. ಮುಂದೆ ಕ್ರಿ.ಶ.೧೧೨೬ರ ವೇಳೆಗೆ ಜಗದೇವ ಹಾಗು ಮೊಲ್ಲೆಬೊಮ್ಮರ ಶೌರ್ಯದ ಸಾಹಸವು ರಣಕಹಳೆಯಾಗಿ ಮಾರ್ಪಾಡುಗೊಂಡಿದ್ದು ಕಂಡುಬರುತ್ತದೆ. ಕಲ್ಯಾಣಕ್ರಾಂತಿಯ ಸಮಯಕ್ಕೆ ಮೊಲ್ಲೆಬೊಮ್ಮಯ್ಯ ಬಂದು ಜಗದೇವನನ್ನು ಸೇರಿಕೊಂಡನೆಂದು ತಿಳಿದು ಬರುತ್ತದೆ.

ಕಲ್ಯಾಣದಲ್ಲಿನ ಸರ್ವನಾಶ ಸೂಚಕ ಉತ್ಪಾತಗಳಾದ ಹಳ್ಳಯ್ಯ – ಮಧುವರಸರ ಕಣ್ಣು ಕೀಳಿಸುವುದು, ಏಳೆಹೂಟೆಗೆ ಕಟ್ಟಿ ಎಳೆಸುವ ಪ್ರಸಂಗ, ಹಳ್ಳಯ್ಯ ಮಧುವರಸರ ಕೊಲೆಯಂಥ ಘೋರ ಕೃತ್ಯಗಳು ನಡೆದಾಗ ಮನೆಗೆ ಬಂದ ಜಗದೇವನನ್ನು ತಾಯಿ ಮಹಾದೇವಿ 'ಶಿವಭಕ್ತರಿಗಾದ ಹಿಂಸೆಯನ್ನು ಕೇಳಿಯೂ ನೀನು ಹೀಗೆ ಸುಮ್ಮನಿರುವುದು ನೀತಿಯಲ್ಲ.' "ಭಕ್ತದ್ರೋಹಿ ಬಿಜ್ಜಳನನ್ನು ಕೊಲ್ಲದೇ ಬಂದ ನಿನಗೆ

ಊಟ ಹೇಗೆ ರುಚಿಸುವುದು. ಮನೆಯಿಂದಾಚೆಗೆ ನಿಲ್ಲು 'ಕುನ್ನಿ' ಎಂದು ಮೂದಲಿಸಿ, 'ಇದೋ ತಿನ್ನು' ಎಂದು ಹಿತ್ತಲ ಬಾಗಿಲಲ್ಲಿ ಅನ್ನ ಸುರಿದಳು. ನಾಲ್ಕು ಕಾಲಾಗಿ ನಾಯಿಯಂತೆ ಜಗದೇವ ತಿನ್ನುತ್ತಿದ್ದನು. ಆಗ ಮೊಲ್ಲೆಬೊಮ್ಮಯ್ಯರು ಜಗದೇವನನ್ನು ಕೂಡಿಕೊಂಡು ಅನ್ನವನ್ನು ತಿಂದರು.' ಜಗದೇವನೊಂದಿಗೆ ಕೂಡಿಕೊಂಡು ನೆಲದ ಮೇಲೆ ಮಂಡಿಯೂರಿ ಊಟ ಮಾಡಿದುದು ವೇಳೆವಾಳಿ ಪದ್ಧತಿಯ ಕುರುಹಾಗಿದೆಯೆಂದು ಡಾ.ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯ ಪಡುತ್ತಾರೆ.[೧೦]

ತಾನು ಭಕ್ತದ್ರೋಹವನ್ನು ಗೈದ ಬಿಜ್ಜಳನನ್ನು ಕೊಲ್ಲುವುದಾಗಿ ಮೊಲ್ಲೆಬೊಮ್ಮಯ್ಯ ಹೇಳುತ್ತಾನೆ. ಆಗ ಜಗದೇವ ನೀನು ಶರಣ ನಿಂದೆಯನ್ನಾಗಲಿ, ಕೊಲೆಯನ್ನಾಗಲಿ ನೋಡಿದವನಲ್ಲ ನೀನೇಕೆ ಈ ಕಾರ್ಯ ಕೈಗೊಳ್ಳುವೆ ಬೇಡ ಎನ್ನುತ್ತಾನೆ. ಆದರೆ ಕಾರಣಿಕ ಪುರುಷನಾಗಿ 'ಬಿಜ್ಜಳನ ಕೊಲೆ' ಎಂಬ ಮಹತ್ವದ ಕಾರ್ಯ ಸಿದ್ಧಿಗಾಗಿಯೇ ಅವತರಿಸಿದ ಮೊಲ್ಲೆಬೊಮ್ಮಯ್ಯ ಜಗದೇವನೊಂದಿಗೆ ಕೈ ಜೋಡಿಸುತ್ತಾನೆ.

ಜಗದೇವ ಮತ್ತು ಮೊಲ್ಲೆಬೊಮ್ಮಯ್ಯರ ಸಂಬಂಧ ಅವಿನಾಭಾವ ಸಂಬಂಧವಾಗಿದೆ. ಇವರ ಸ್ನೇಹವನ್ನು ಕಾವ್ಯ ಹೀಗೆ ಉಲ್ಲೇಖಿಸುತ್ತದೆ.

'ಇಂತು ಮೊಲ್ಲೆಯ ಬೊಮ್ಮಿದೇವನು
ಸಂತತಂ ಜಗದೇವನೊಳುಮ
ತ್ಯಂತ ಸ್ನೇಹಿತರಾಗಿ ಬಿಜ್ಜಳಧಾತ್ರಿಪಾಲಕಂಗೆ
ಸಂತಸದಲಿರಲೊಂದು ದಿವಸದಿ" (೧೭–೪೬)

ಹೀಗೆ ಬಿಜ್ಜಳನನ್ನು ಕೊಲ್ಲುವ ನಿರ್ಧಾರ ಕೈಗೊಂಡ ಇಬ್ಬರೂ ದೇವವಸ್ತ್ರವನ್ನು ಉಟ್ಟುಕೊಂಡು ವೀರಾವತಾರ ತಾಳಿ, 'ಈಶ ನಿಂದಕನ ಕೊಲೆಗೈಯುವುದಾಗಿ ಆರ್ಭಟಿಸಿ, ದೀವಟಿಗೆಯಲ್ಲಿ ಮಲಗಿದ ಅಲಗನ್ನು ಹಿಡಿದು, ಬಿಜ್ಜಳನ ಅರಮನೆಗೆ ನುಗ್ಗಿ ಕೊಲೆ'ಗೈದರು. ಬಿಜ್ಜಳನನ್ನು ಕೊಂದದ್ದು ನಡುಬೀದಿಯಲ್ಲಿ ಅಲ್ಲ, ಒಳಚಾವಡಿಯಲ್ಲಿ ಎಂಬ ಅಂಶವನ್ನು ಗಮನಿಸುವ ಅಗತ್ಯ ಇದೆ, ಈ ರೀತಿ ಅರಸನೊಬ್ಬನನ್ನು ಕೊಂದು, ನಗರದಲ್ಲೆಲ್ಲಾ ಸಾರುತ್ತಾ ಸಾಗಿದರು ಎಂಬ ಆಂಶ ಗಮನಿಸಿದಾಗ, ಸಮಯಾಚಾರ ವೃಂದಕ್ಕೆ ಸೇರಿದ ಜಗದೇವ ಹಾಗು ಮೊಲ್ಲೆಬೊಮ್ಮಯ್ಯರಂತೆ ಇನ್ನು ಅನೇಕ ಶರಣರು 'ಶಿವದ್ರೋಹಯನ್ನು' ಸಹಿಸದವರಾಗಿದ್ದು, ಇವರ ಈ ಒಂದು ಆಚರಣೆ, ಆದರ್ಶ ಒಂದು ಒಪ್ಪಿತ ಮೌಲ್ಯವಾಗಿರುವ ಸಾಧ್ಯತೆ ಇದೆ. ಹಾಗಾಗಿಯೇ ಶಂಕರ ದಾಸಿಮಯ್ಯ, ಏಕಾಂತ, ರಾಮಯ್ಯ, ಗುಡ್ಡವ್ವೆಯಂಥ ಶಿವಶರಣರು ವೀರಶೈವ ಧರ್ಮ ಸ್ಥಾಪನೆಗೆ (ಪ್ರತಿಷ್ಠಾಪನೆ) ತಮ್ಮನ್ನು ತಾವೇ ಅರ್ಪಿಸಿಕೊಂಡು ಪವಾಡಗಳನ್ನು ಮೆರೆದರು. ಜಗದೇವ, ಮೊಲ್ಲೆಬೊಮ್ಮಯ್ಯರಂಥವರು ಸ್ಥಾಪಿತಗೊಂಡ ಧರ್ಮವನ್ನು ಉಳಿಸಿಕೊಳ್ಳುವ ಸಲುವಾಗಿ 'ಬಿಜ್ಜಳನಂಥ'ವರನ್ನು ಕೊಲ್ಲಲು ಮುಂದಾಗಿರುವುದು ಕಂಡುಬರುತ್ತದೆ. 'ಶಿವಾಚಾರದ ಭೀಮಾನದಲ್ಲಿ ಜಗದೇವ ಮೊಲ್ಲೆಯ ಬೊಮ್ಮಣ್ಣಗಳ ಕೈಯಲ್ಲಿ ಬಿಜ್ಜಳ ಮಡಿದನು'[೧೧] ಎಂಬ ವಿಚಾರ ಬರುತ್ತದೆ. 'ರಾಕ್ಷಸದ ಪಾಲ್ಗುಣಶುದ್ಧ ಕುಜನೌಮಿ ಸರಿರಾತ್ರಿ' ಬಿಜ್ಜಳನ ಕೊಲೆಯಾಗಬೇಕೆಂದು ಮೊದಲು

ಗೊತ್ತು ಮಾಡಿದಂತೆ ಕೊಲೆಯಾಗುತ್ತದೆ.'[೧೨] ಎಂದು ಉಲ್ಲೇಖಿಸಿದೆ.ಒಟ್ಟಾರೆಯಾಗಿ ಜಗದೇವ ಹಾಗೂ ಮೊಲ್ಲೆಬೊಮ್ಮಯ್ಯರು ಬಿಜ್ಜಳನನ್ನು ಕೊಂದಿರುವ ಮಹತ್ವದ ಘಟನೆ ನಡೆದದ್ದು 'ಕ್ರಿ.ಶ.ಸು.೧೧೬೮ರಲ್ಲಿ ಎಂಬುದು ಚರಿತ್ರೆಯಲ್ಲೆಲ್ಲ ದಾಖಲಾಗಿದೆ.

ಹೀಗೆ ಬಿಜ್ಜಳನ ಕೊಲೆಗೈದು ತಮ್ಮ ವಿಜಯವನ್ನು ಸಾರುತ್ತಾ, ಬಂದ ವೀರರನ್ನು ಶರಣರೆಲ್ಲ ಆನಂದದಿಂದ ಹೊಗಳಿದರು. ದೇವತೆಗಳೆಲ್ಲ ಪುಷ್ಪವನ್ನೆರಚಿದರು. ಹೀಗೆ ಮನೆಗೆ ಬಂದ ಇವರನ್ನು ತಾಯಿ ಮಹಾದೇವಿ ಆರತಿಯನ್ನೆತ್ತಿ ಒಳಕರೆದು, ಜಗದೇವ, ಮೊಲ್ಲೆಬೊಮ್ಮಯ್ಯರಿಗೆ ಜಳಕ ಮಾಡಿಸಿ, ಲಿಂಗಾರ್ಚನೆಯನ್ನು ಮಾಡಿಸಿ ಥಳಥಳಿಸುವ ಹರಿವಾಣದಲ್ಲಿ ಊಟಮಾಡಿಸಿದಳು. ಪರವಾದಿ ಬಿಜ್ಜಳನನ್ನು ವರಿಸಿದೆವು ಎನ್ನುವ ಇವರಿಗೆ ಮಹಾದೇವಿಯು

'ಇಂದು ನಿಮ್ಮಯ ಭಾಷೆ ಬಂದುದು
ಇಂದು ನಿಮ್ಮಯ ಪಾಪ ಹರಿಯಿತು
ಇಂದು ಭಕ್ತರ ಆಳಿನಾಳೆಂಬುವ ಬಿರುದು ನಿಮಗೆ
ಸಂದುದ ಭವನಮವರ ಶಿಶುಗಳು
ಮಂದುಮವರಾಳುಗಳು ಭೃತ್ಯಮ
ರೆಂದೆನಿಸಿ ಬಾಳಿಸುತ ಪರಸ್ಯಾರತಿಯನೆತ್ತಿದಳು (೧೭-೬೩)

ಸುರರ ಜಯಘೋಷ ಮೊಳಗಿತು. ಹೀಗೆ ಜಗದೇವ ಮತ್ತು ಮೊಲ್ಲೆಬೊಮ್ಮಯ್ಯರ ಸಂಬಂಧ ಬೆಸೆದುಕೊಳ್ಳುತ್ತವೆ. ಭೂಲೋಕದ ಕಾರ್ಯ ಸಾಧಿಸಿದ ಜಗದೇವ, ಮೊಲ್ಲೆಬೊಮ್ಮಯ್ಯರನ್ನು ಶಿವಪುಷ್ಪಕ ವಿಮಾನದಲ್ಲಿ ಕೈಲಾಸಕ್ಕೆ ಕರೆದೊಯ್ಯುತ್ತಾನೆ. ವೀರಗಣರಲ್ಲಿ ಒಬ್ಬರಾದ ಇವರಿಗೆ ಗಣ ಪದವಿಯನ್ನಿತ್ತು ಗೌರವಿಸಲಾಯಿತು. ಇತ್ತೀಚೆಗೆ ಮೈಸೂರಿನ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟವಾದ ನಂಜುಂಡ ಭಾಗವತ ವಿರಚಿತ 'ವೃಷಬೇಂದ್ರ ವಿಳಾಸ' ಹೆಸರಿನ ಯಕ್ಷಗಾನ ಮಹಾನಾಟಕವು ಸಚಿತ್ರವನ್ನೊಳಗೊಂಡ ಕೃತಿ. ಇದರಲ್ಲಿ ಮೊಲ್ಲೆಬೊಮ್ಮಯ್ಯಗಳ ಚರಿತ್ರೆಗೆ ಸಂಬಂಧಿಸಿದ ಚಿತ್ರಗಳಿರುವದು ಗಮನಿಸಬೇಕಾದ ಸಂಗತಿ.

**ಕೊನೆಯ ಟಿಪ್ಪಣಿಗಳು**

೧. ಹಲವಾರು ವೀರಶೈವ ಕಾವ್ಯಗಳು ಮೊಲ್ಲೆಬೊಮ್ಮಯ್ಯನ ಹೆಸರನ್ನು ಉಲ್ಲೇಖಿಸಿದೆ.

೨. ಕೋಡಿಕೊಪ್ಪ ಶಾಸನದಲ್ಲಿ ಉಲ್ಲೇಖಗೊಂಡ ಮೊಲ್ಲೆಬೊಮ್ಮಯ್ಯ ಹಾಗೂ ಕಲ್ಲೂರಿನ ಶಾಸನದ ಮೊ.ಬೊ. ನೇ ಶರಣಬೊಮ್ಮಯ್ಯ ಎಂಬ ಡಾ.ದೀಕ್ಷಿತ್ ಹಾಗೂ ಬಿ.ವ್ಹಿ.ಶಿರೂರವರ ಅಭಿಪ್ರಾಯವನ್ನು ಒಪ್ಪದ ಕಲಬುರ್ಗಿಯವರು ಮತ್ತೆ ಇಲ್ಲಿ ಕೋಡಿಕೊಪ್ಪ ಗ್ರಾಮಕ್ಕೂ, ಮೊಲ್ಲೆಬೊಮ್ಮಯ್ಯನಿಗೂ ತಳಕು ಹಾಕುತ್ತಾರೆ. ಒಂದು ವೇಳೆ ಕಲಬುರ್ಗಿಯವರು ಹೇಳಿದಂತೆ ಆದಲ್ಲಿ ಡಾ.ದೀಕ್ಷಿತ್ ಹಾಗೂ ಡಾ.ಬಿ.ವ್ಹಿ.ಶಿರೂರವರ ಅಭಿಪ್ರಾಯವೇ ಹೆಚ್ಚು ಸರಿ ಎನಿಸುತ್ತದೆ.

೩. ಪ್ರೊ.ಬಿ.ಷೇಕ್‌ಅಲಿ ಅವರು ಸಂಪಾದಿಸಿದ ಕರ್ನಾಟಕ ಚರಿತ್ರೆ (ಪುಟ ೬೯)

೪. ಎಂ.ಎಂ.ಕಲಬುರ್ಗಿ ಗೊಲ್ಲ ಸಿರುಮನ ಚರಿತೆ ಪ್ರಸ್ತಾವನೆಯಲ್ಲಿ (ಪುಟ ೧೬)

೫. ಡಾ.ಬಿ.ವ್ಹಿ.ಶಿರೂರ ಸಂಶೋಧನ ಚತುರ್ಮುಖ ಪುಟ.೩೧೮.

೬. ಡಾ.ಷೇಕ್‌ಅಲಿ ಸಂಪಾದಿಸಿದ ಕರ್ನಾಟಕ ಚರಿತ್ರೆ. ಪು.೬೮.

೭. ಡಾ.ಬಿ.ವಿ.ಶಿರೂರ 'ಸಂಶೋಧನ ಚತುರ್ಮುಖ ಪು.೩೨೦.

೮. ರ‍್ಯಾವಣಿಕೆ ಗ್ರಾಮದ ಸ್ಥಳೀಯರು ಕಟ್ಟಿಕೊಡುವ ಕಥೆ.

೯. ಸಿದ್ಧರಾಮ ಉಪ್ಪಿನ, ಬೋಜಪ್ಪದೇಸಾಯಿ ಪು. ೧೧,೧೨,೧೩.

೧೦. ಕಲಬುರ್ಗಿ ಎಂ.ಎಂ. ಮಾರ್ಗ–೪, ಪು.೪೪೮.

೧೧. 'ಶೂನ್ಯ ಸಂಪಾದನೆ' ವಚನ ೯೭೪

೧೨. 'ಧರ್ಮಭಂಡಾರಿ ಬಸವಣ್ಣನವರು' ಪುಟ.೩೦೭.

* * *

ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಬದುಕನ್ನು ನಿರೂಪಿಸುವಲ್ಲಿ ಅದರಲ್ಲೂ, ಶರಣರ ಬದಕನ್ನು ಅನಾವರಣಗೊಳಿಸುವಲ್ಲಿ ಬಹುತೇಕ ಕಾವ್ಯಗಳು ಸಹಕಾರಿಯಾಗಿವೆ. ಇಂಥ ಕಾವ್ಯಗಳಲ್ಲಿ ಮೊಲ್ಲೆಬೊಮ್ಮಯ್ಯಗಳ ಕಾವ್ಯಕ್ಕೂ ಮಹತ್ವದ ಸ್ಥಾನವಿದೆ. ಐತಿಹಾಸಿಕ ವ್ಯಕ್ತಿಗಳಾದ ಜಗದೇವ, ಮೊಲ್ಲೆಬೊಮ್ಮಯ್ಯರು ಶರಣ ಚಳುವಳಿಗೆ ಪ್ರಭಾವಿತರಾಗಿ, ವೀರವ್ರತವನ್ನು ಕೈಗೊಂಡು 'ಸಮಯಾಚಾರಿ'ಗಳಾಗಿ ಬದುಕಿದವರು, ಇವರು ಆಚರಣೆ, ಆರಾಧನೆ, ಜನವದಂತಿ, ನಂಬಿಕೆಯಂಥ ಮೌಖಿಕ ಹಾಗೂ ಲಿಖಿತ ಸಂಪ್ರದಾಯಗಳಲ್ಲಿ ದಾಖಲಾಗುತ್ತ ಬಂದಿದ್ದಾರೆ. ಇಂಥ ಕಾವ್ಯ ನಾಯಕರು ಪಾರಂಪರಿಕ ಪ್ರತೀಕವಾಗಿ ನಿಲ್ಲುತ್ತಾರೆ. ಹಾಗೆಯೇ ಭೂತಕಾಲದ ಜೀವನ ಪದ್ಧತಿಗೆ ಕನ್ನಡಿ ಹಿಡಿದು ವರ್ತಮಾನಕ್ಕೆ ದಾರಿದೀಪವಾಗುತ್ತಾರೆ.

ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವ ಇಂಥ ಕಾವ್ಯಗಳು ಯಥೇಚ್ಛವಾಗಿ ಸಾಂಸ್ಕೃತಿಕ ಅಂಶಗಳನ್ನು ಹೊಂದಿವೆ. 'ಸಂಸ್ಕೃತಿ' ಎಂಬುದು ಪರಿವರ್ತನಶೀಲವಾದದ್ದು, ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ, ಸಂದರ್ಭದಿಂದ ಸಂದರ್ಭಕ್ಕೆ ವೈವಿಧ್ಯತೆಯನ್ನು ಪಡೆಯುತ್ತಾ ಸಾಗಿದೆಯೇ ಹೊರತು, ಅದು ನಾಶವಾಗುವಂಥದ್ದಲ್ಲ. ಒಟ್ಟಿನಲ್ಲಿ ಸಂಸ್ಕೃತಿ ಎಂಬುದನ್ನು "ಒಂದು ಜನಾಂಗ ಅಥವಾ ಒಂದು ಸಮೂಹದ ಒಪ್ಪಿತ ಮೌಲ್ಯ"ವಾಗಿ ಗ್ರಹಿಸಬಹುದು. ಒಂದು ಸಮೂಹದ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುವದೇ ಸಂಸ್ಕೃತಿಯಾಗಿದೆ. ನಮ್ಮ ಆಚಾರ, ವಿಚಾರ, ನಡೆ, ನುಡಿ, ಆಚರಿಸುವ ಹಬ್ಬಹರಿದಿನಗಳು, ಸಂಪ್ರದಾಯ, ನಂಬಿಕೆಗಳೇ ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

ಸಂಸ್ಕೃತಿ ಎಂಬುದು ವ್ಯಕ್ತಿ-ವ್ಯಕ್ತಿಗಳ ನಡುವೆ, ಸಮೂಹ-ಸಮೂಹದ ನಡುವೆ, ದೇಶ-ದೇಶಗಳ ನಡುವೆ ಗಾಢವಾದ ಸಂಬಂಧವನ್ನು ಬೆಸೆಯುತ್ತವೆ. ಆಧುನಿಕತೆಯ ಪ್ರಭಾವದಿಂದಾಗಿ ನಮ್ಮ ಸಂಸ್ಕೃತಿಯ ಚಿತ್ರಣವೇ ಬದಲಾಗಿದೆ. ಹೀಗಾಗಿ ಜನಪದ ಹಾಡು, ಕುಣಿತ, ನಂಬಿಕೆ, ಆಚರಣೆಗಳೆಲ್ಲ ಕಣ್ಮರೆಯಾಗುತ್ತಿವೆ. ಆಧುನಿಕತೆಯ ವೈಯ್ಯಾರದ ಕಣ್ಣನ್ನು ತಪ್ಪಿಸಿ ಅಲ್ಲೊಂದು ಇಲ್ಲೊಂದು ಉಳಿದಿರುವ ಜನಪದ ಹಾಡುಗಳು ಎಷ್ಟು ಅರ್ಥಗರ್ಭಿತವಾಗಿವೆ. ಎಂದರೆ ಕೇವಲ ಒಂದು ಪದ ಇಡೀ ಘಟನೆಯ ಚಿತ್ರಣ ನೀಡುವಂಥದ್ದು.

ಆನೆ ಬಂತೊಂದು ಆನೆ

ಇದೆಲ್ಲಿತ್ತ ಮುದಿ ಆನೆ.

ಎಂಬ ಹಾಡು ವಿಜಯನಗರ ಸಾಮ್ರಾಜ್ಯದ ಅವಸಾನದ ಚಿತ್ರಣವನ್ನೆ ಕಣ್ಣೆದುರಿಗೆ ನಿಲ್ಲವಂತೆ ಮಾಡುತ್ತದೆ. ಹಾಗೆಯೇ ೧೨ನೇ ಶತಮಾನದ ಶರಣರನ್ನು ಕಂಡಾಗ

ಕೆಟ್ಟಿತ್ತು ಕಲ್ಯಾಣ ಹಾಳಾಯ್ತು ನೋಡಾ।

ಒಬ್ಬ ಜಂಗಮದಭಿಮಾನದಿಂದ

ಬಿಜ್ಜಳರಾಯನ ಆಳಿಕೆ ತೆಗೆಯಿತ್ತು.

ಎಂಬ ಮಾತು ವೈಭವಯುತ ಸಾಮ್ರಾಜ್ಯದ ಅವಸಾನದ ಚಿತ್ರಣವನ್ನೆ ನೀಡುತ್ತದೆ. ಹೀಗೆ ಇವರ ಕಲಾ ಸಿರಿವಂತಿಕೆ ಹಿಂದೂ ಸಂಸ್ಕೃತಿಯ ಪ್ರತೀಕವಾಗಿ ನಿಲ್ಲುತ್ತವೆ.ಈ ಹಿನ್ನಲೆಯಲ್ಲಿ 'ಮೊಲ್ಲೆಬೊಮ್ಮಯ್ಯಗಳ ಕಾವ್ಯವು' ಕೂಡ ಸಾಂಸ್ಕೃತಿಕ ಅಂಶಗಳಿಂದ ಫಲಭರಿತವಾಗಿದೆ. ಕಾವ್ಯದಲ್ಲಿ ಉಲ್ಲೇಖಿತಗೊಂಡ ಕೆಲವು ಆಚರಣೆಗಳು ಇಂದಿಗೂ ಪ್ರಸ್ತುತವಿವೆ. ಇನ್ನು ಕೆಲವು ಆಚರಣೆಗಳು ತಮ್ಮ ಮೂಲರೂಪವನ್ನು ಕಳೆದುಕೊಂಡು ವ್ಯತ್ಯಾಸವಾಗಿರುವದು ಕಂಡು ಬರುತ್ತದೆ.

ಸಾಂಸ್ಕೃತಿಕ ಬದುಕಿನ ಪ್ರತೀಕವಾಗಿ ವರ್ತಕ ಸಮೂಹ, ಸೊಳೆಗೇರಿ, ಕಳಸ, ಕನ್ನಡಿ, ಸ್ತ್ರೀಯರುಧರಿಸುವ ಸೀರೆಗಳು, ವೀಣೆ, ಕಿವಿಯಲ್ಲಿ ಧರಿಸಿದ ನವ ರತ್ನ ನಿರ್ಮಿತ ಓಲೆಗಳು, ಮುತ್ತಿನ ಮೂಗುತಿ, ಕುವರಿಯರ ಸಿಂಗಾರ, ಸಿಂಗರಿಸಿದ ಮಾಂಗಲ್ಯ ಕಲ್ಯಾಣ ಮಂಟಪ, ಪೂಜೆ ಸಾಮಗ್ರಿಗಳಾದ ಚಂದನಾಕ್ಷತೆ, ಪುಷ್ಪ ಪತ್ರೆ, ಧೂಪಾರ್ತಿ, ತಾಂಬೂಲ, ತೋರಣ, ವಿವಾಹ, ವೀಣೆಯನ್ನು ನುಡಿಸುವದು ಲಿಂಗಾರ್ಚನೆ ಇತ್ಯಾದಿ ಎಲ್ಲವೂ ಅಂದಿನ ಸಾಂಸ್ಕೃತಿಕ ಬದುಕಿನ ಪ್ರತಿಬಿಂಬಗಳಾಗಿ ನಿಲ್ಲುತ್ತವೆ.

**ಕಥಾಸ್ವರೂಪ**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅದರಲ್ಲೂ ೧೨ನೇ ಶತಮಾನ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮಹತ್ತರವಾದ ತಿರುವನ್ನು ಪಡೆದಿದೆ. ಈ ಒಂದು ತಿರುವಿನ ಸುತ್ತ ಹೆಣೆದ ಬಹುತೇಕ ವೀರಶೈವ ಕಾವ್ಯಗಳಲ್ಲಿ ಮೊಲ್ಲೆಬೊಮ್ಮಯ್ಯನ ಕಾವ್ಯ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಬಹುಮುಖ್ಯವಾಗಿ ಹೇಳಬೇಕೆಂದರೆ 'ಜನಪದ ಕಥಾ ಸ್ವರೂಪ'ವನ್ನು ಈ ಕಾವ್ಯ ಹೋಲುತ್ತದೆ ಐತಿಹಾಸಿಕ ವ್ಯಕ್ತಿಯನ್ನು ವೈಭವೀಕರಿಸಿ, ಪುರಾಣೀಕೃತಗೊಳಿಸುವ ಕಾರ್ಯ ಮಧ್ಯಕಾಲೀನ ಯುಗದ ಬಹುಮುಖ್ಯ ಲಕ್ಷಣ. ಹೀಗಾಗಿ ಇಂಥ ಹಲವಾರು ನಾಯಕರು ಇತಿಹಾಸದ ಮಹತ್ವವನ್ನೆ ಕಳೆದುಕೊಂಡಿದ್ದಾರೆ.

ಕಾವ್ಯದಲ್ಲಿ ಉಲ್ಲೇಖತಗೊಂಡಿರುವ ಕಾವ್ಯವನ್ನು ಆತನ ಜೀವನ ಪರಿವರ್ತನೆಯ ಘಟನೆಗಳನ್ನಾಧರಿಸಿ

* ಮೊದಲ ಘಟ್ಟ
* ಎರಡನೇ ಘಟ್ಟ
* ಅನಂತರದ ಘಟ್ಟ

ಎಂದೂ ವಿಭಾಗಿಸಿಕೊಳ್ಳಬಹುದು.

**ಮೊದಲ ಘಟ್ಟ :**

ಮೊಲ್ಲೆಬೊಮ್ಮಯ್ಯನ ಜನನ, ಜನನದ ಉದ್ದೇಶ, ನ್ಯಾಯದ ಕಟ್ಟೆ, ಕಲ್ಲೇಶನ ಸನ್ನಿಧಿಯಲ್ಲಿ ಶಿಶುವಿನ ಬೆಳವಣಿಗೆ, ಪೂಜೆ, ವಿಷಯಗಳನ್ನು ಒಳಗೊಂಡಿದೆ.

ಕವಿ ಧೂಪದ ರಾಚೇಶನು ಕಾವ್ಯ ಪ್ರಾರಂಭದಲ್ಲಿ ಶ್ರೀಗುರುವಿಗೆ, ಮಹಾದೇವನಿಗೆ, ಶ್ರೀಗಣಾಧೀಶನಿಗೆ, ಮುಖ್ಯವಾಗಿ ಕಲ್ಪುರಾಧೀಶನಿಗೆ ನಮಸ್ಕರಿಸಿ, ತನ್ನ ಕಾವ್ಯ ರಚನೆಗೆ ಆಶೀರ್ವದಿಸಬೇಕಾಗಿ ಕೋರುತ್ತಾನೆ. ಸಂಪ್ರದಾಯದಂತೆಯೆ ಕಾವ್ಯಪ್ರಾರಂಭದಲ್ಲಿ ಸ್ವಗುರು ಸ್ತುತಿ, ಗುರು–ಲಿಂಗ–ಜಂಗಮ ಸ್ತೋತ್ರ, ಪರಶಿವಗಣನಾಥ, ವಾಣಿಯರಸ್ತುತಿ ಬಂದಿದೆ, ವೀರಶೈವಗಣರಲ್ಲಿ ಬಸವ, ಅಲ್ಲಮರ ಜೊತೆಗೆ ರೇವಣಸಿದ್ದನಾಥರನ್ನು ನೆನೆದಿದ್ದಾನೆ. ಕಾವ್ಯದ ಕೊನೆಯಲ್ಲಿ ಚಾಮರಸನ ಮಾರ್ಗದಲ್ಲಿ ನಡೆದು ತನ್ನ ಕಾವ್ಯವನ್ನು ಕುರಿತು' 'ಇದು ಪೊಟ್ಟೆಯಂ ಪೊರೆವುದಕೆ ಕಲ್ತುದನಿಟ್ಟು, ವಿಧಿಸಿದ ಕೃತಿಯುಮಲ್ತುಮದು ವೀರಗಣನಾಥ ಮುದದಿ ಮರ್ತ್ಯಯಕ್ಕಿಳಿದು, ಭಕ್ತಿಸಂಪದನೆನಿಸಿ ಪರವಾದಿಗಳನು ಗೆಲ್ದು ಶಂಕರನ ಕೊಳ್ಗೊಂಡ ಕಥೆ' ಎಂದು ಹೇಳಿಕೊಂಡ್ಡಿದ್ದಾನೆ.

ಬಹುತೇಕ ನಮ್ಮ ಪುರಾಣ ಕಾವ್ಯಗಳೆಲ್ಲ ಪ್ರಾರಂಭವಾಗುವದೇ 'ಕೈಲಾಸದ ಶಿವನೋಲಗದಿಂದ' ಜಗತ್ತಿನಲ್ಲಿ ಹೆಚ್ಚಾದ ಪಾಪ ನಾಶಕ್ಕಾಗಿಯೋ, ಅಥವಾ ಭಕ್ತನ ಅಗಾಧ ಭಕ್ತಿಯನ್ನು ಪರೀಕ್ಷಿಸಿ ಆತನ ಮಹಿಮೆಯನ್ನು ಜಗತ್ತಿಗೆ ಸಾರುವ ಉದ್ದೇಶದಿಂದಲೋ, ಶಿವನೋಲಗದಲ್ಲಿ ದೇವಾನುದೇವತೆಗಳೆಲ್ಲ ಚರ್ಚಿಸಿ, ಶಿವನ ಶಕ್ತಿಯ ಪ್ರತೀಕವಾಗಿ, ಕಾರಣಿಕ ಪುರುಷ, ಅಗಾಧ ವ್ಯಕ್ತಿತ್ವವುಳ್ಳ ಸಿದ್ಧಿ ಪುರುಷನ ಜನನವಾಗುತ್ತದೆ. ಇದಕ್ಕೆ ಬೊಲ್ಲೆಬೊಮ್ಮಯ್ಯನ ಕಾವ್ಯವೂ ಹೊರತಾಗಿಲ್ಲ. ಕವಿ ಧೂಪದ ರಾಚೇಶ ಕಾವ್ಯ ಪ್ರಾರಂಭದಲ್ಲಿಯೆ ಈ ಕಾವ್ಯ ಏನನ್ನು ಒಳಗೊಂಡಿದೆ ಎಂಬುದನ್ನು ಸ್ಪಷ್ಟಪಡಿಸುತ್ತಾನೆ. 'ಹೆಣ್ಣು, ಹೊನ್ನು, ಮಣ್ಣಿಗಾಗಿ' ಹೋರಾಡಿ ಅಳಿದುಳಿದವರ ಕಥೆ ಅಲ್ಲ. ಇದು ಮಧುರೋಕ್ತಿಯ ಭಕ್ತಿಯನ್ನು ಮುದದಿಂದ ಒಲಿದು ಅರ್ಚಿಸಿದ ಭಕ್ತರ ಕಥೆ. ಸುರುಚಿಯುಳ್ಳ ಸಹೃದಯರೆಲ್ಲ ಗುಣಗಣದಲ್ಲಿ ಆಲಿಸುವಂತಹ ಸತ್ಕೃತಿ ಇದಾಗಿದೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಿ ತಾಲೂಕಿನ ಕಲ್ಲೂರಿಗೆ ಸಮೀಪದಲ್ಲಿ 'ರಾವಣಿಕೆ' ಎಂಬ ಗ್ರಾಮವಿದೆ. ಈ ಗ್ರಾಮದಲ್ಲಿ ಇಂದಿಗೂ ಐತಿಹ್ಯಗಳು ಕಂಡು ಬರುತ್ತವೆ. ಬೊಮ್ಮಗೌಡ, ಕಲ್ಲಮ್ಮ ಎಂಬ ದಂಪತಿಗಳು ಅಧಿಕ ಸಂಪತ್ತು, ಸಮೃದ್ಧಿಯಿಂದ ಇರುತಿರಲು, ಇವರಿಗೆ ಒಂದು ಕೊರತೆ, ಚಿಂತೆ ಕಾಡುತ್ತಿತ್ತು. ಹಂಸವಿಲ್ಲದ ಕೊಳ, ಪೆರ್ದೆರೆ ಇಲ್ಲದ ಕಡಲು, ಇರುಳ ಜ್ಯೋತಿ ಇಲ್ಲದ ಮನೆ, ಹೇಗೆ ಬರಡಾಗಿದೆಯೋ, ಹಾಗೆ ತನ್ನ ಮಗುವಿಲ್ಲದ ಬಾಳು ಏನುಫಲ? ಎಂದು ಮಗುವಿಗಾಗಿ ಹಂಬಲಿಸಿ, ಹಲುಬುವಳು, ತಾವೊಬ್ಬ 'ದಿಪಕ್ಕೆ ದಿಕ್ಕಿಲ್ಲ' ಎಂಬುದನ್ನು ನಾವು ಬಂಜೆಯ ಬದುಕಿಗೆ ಅನ್ವಯಿಸುತ್ತೇವೆ. ಈ ಒಂದು ಮಗುವೇ ಬಂಜಿಯ ಬದುಕಿಗೆ ದೀಪ ಎಂಬ ಕಲ್ಪನೆ ಅವತ್ತಿಗೂ ಇತ್ತು, ಇಂದಿಗೂ ಕೂಡಾ ಈ ಭಾವನೆ ಇದೆ.

ತನ್ನ ಮನದ ಬಯಕೆಯ ಈಡೇರಿಕೆಗಾಗಿ ಕಂಡ ಕಂಡ ದೇವರಿಗೆಲ್ಲ ಕೈಮುಗಿದು, ಹರಕೆ ಹೊರುವದು ಮನುಷ್ಯ ಸಹಜ ಗುಣವೇ. ಹೀಗೆ ಕಾವ್ಯದಲ್ಲಿ ದಂಪತಿಗಳಿಬ್ಬರು ಆರಾಧ್ಯದೈವವಾದ 'ಕಲ್ಲೂರ ಕಲ್ಲನಾಥನಿಗೆ'

ಬಂದು ಪೂಜೆಯನ್ನು ಸಲ್ಲಿಸುತ್ತಾರೆ. ಕಲ್ಲಮ್ಮ 'ಪತಿಯರಿಯದೊಲು ಬೇಡ್ಕೊಂಡಳಭವನ ಸುತನ ಕೊಡೆ ನಿಮ್ಮಯಾ ಪೆಸರಗರೆವೆನೆಂದು'. (೨-೪೩) ಹರಕೆ ಹೊರುತ್ತಾಳೆ. ಈ ಮೊರೆಯಿಂದ, ಆ ಕಲ್ಲೇಶನ ಅನುಗ್ರಹದಿಂದ ಮಗುವಿನ ಜನನವಾಗುತ್ತದೆ. ಕೈಲಾಸದಿಂದ ವೀರಗಣೇಶ್ವರನ ಅವತಾರ ಭೂಲೋಕದಲ್ಲಿ ಜನಿಸಿ ಒಂದು ಮಹತ್ಕಾರ್ಯ ಸಿದ್ದಿಯನ್ನು ಕೈಗೊಂಡು ಭಕ್ತಿ ಪಾರಮ್ಯವನ್ನು ಬಿತ್ತಿರಿಸುತ್ತಾನೆ.

ಇದು ಬಿಜ್ಜಳನೆಂಬುವ ಧರಣೇಂದ್ರನು

ಮದಮಾವರಿಸಿಯೆ ಶರಣರ ಬಾಧಿಸೆ

ಮದನಾರಿಯ ಶಿಶುವನಿಸುವ ಮೊಲ್ಲೆಯ ಬೊಮ್ಮನೆನಿಪ ಶರಣ

ಅಧಿಕ ಕಿನಿಸನಾಂತವನ ವಧಿಸಿ ಸನ್ಮುದದಿಂ

ಕೈಲಾಸಕೆ ಸತಿ ಸಂದುದ

ಸದು ವಿನಯದಿ ಬಿತ್ತರಿಸುವೆ ಭಕ್ತರು ಲಾಲಿಪುದೆಂತೆನಲು (೧-೧೬)

ಯಾವ ಉದ್ದೇಶಕ್ಕಾಗಿ ಮೊಲ್ಲೆಬೊಮ್ಮಯ್ಯನ ಜನನವಾಗುತ್ತದೆಂಬುದನ್ನು ಕವಿಯೇ ಸ್ಪಷ್ಟಪಡಿಸುತ್ತಾನೆ. ಕಲ್ಲೇಶನ ಅನುಗ್ರಹದಿಂದ ಜನಿಸಿದ ಮಗುವಿನ 'ಹೆಸರೇ' ಗೌಡನಿಗೂ, ದೈವಕ್ಕೂ ವೈರುದ್ಧವನ್ನು ಕಟ್ಟಿಕೊಡುತ್ತದೆ. ಬೊಮ್ಮಗೌಡ ತನ್ನ ಕುಲದೈವವಾದ 'ಕರುಗಲ್ಲ ಬ್ರಹ್ಮ'ನ ಹೆಸರಿಡುತ್ತಾನೆ. ಕಲ್ಲಮ್ಮ ತಾ ಹರಕೆ ಹೊತ್ತಂತೆ 'ಕಲ್ಲೇಶನ' ಹೆಸರಿಡುವಂತೆ ಹೇಳುತ್ತಾಳೆ. ಆದರೆ ಬೊಮ್ಮಗೌಡ ಅದನ್ನೊಪ್ಪುವದಿಲ್ಲ.

'ಎಮ್ಮಯ ಮನೆದೈವವು

ಕರುಗಲ್ಲಬ್ರಹ್ಮನಲ್ಲದೆ ಬೇರೆ ದೈವವಂ

ದರಸಲುಂಟೇ ಎತ್ತಣಾ ಕಲ್ಲಮನೆನ್ನಲು

ತರುಣಿ ಪತಿನುಡಿಯನೊಪ್ಪಿದಳು ಬೊಮ್ಮಣನೆಂಬ

ಪೆಸರಾಯಿತು ಶಿಶುವಿಗೆ (೨-೫೬)

ಮಾತಿಗೆ ತಪ್ಪಿದ ದಂಪತಿಗಳನ್ನು ಶಿಕ್ಷಿಸಬಯಸಿದ ಕಲ್ಲೇಶನು ಜಂಗಮರೂಪಿಯಾಗಿ ಬಂದು ತಾಯಿ ಮಡಿಲಲ್ಲಿ ಬೆಚ್ಚಗೆ ಮಲಗಿದ ಮಗುವನ್ನು ರಾತ್ರಿ ಬಂದು ಎತ್ತಿಕೊಂಡು ಹೋಗುತ್ತಾನೆ. ಮೂರು ಲೋಕವನ್ನು ಸೃಷ್ಟಿಸುವಂಥ, ಸಂಹರಿಸುವಂಥ ಹಾಗೂ ರಕ್ಷಿಸುವಂಥ ಮಹಿಮೆಯನ್ನು ಹೊಂದಿದ ಕಲ್ಲೇಶ ಚೋರತನದಿಂದ ರಾತ್ರಿ ಮಗುವನ್ನು ಎತ್ತಿಕೊಂಡು ಹೋಗುತ್ತಿದ್ದ. ಹಾಗಾದರೆ ಯಾಕೆ ಹೀಗೆ ಮಗು ಹಗಲಿನಲ್ಲಿ ಹೆತ್ತವರ ಬಳಿ, ರಾತ್ರಿ ಕಲ್ಲೇಶನ ಸ್ನನಿಧಿಯಲ್ಲಿ ಮೃದುಲತೆಯಂತೆ ಬೆಳೆಯತೊಡಗಿದ ಎಂಬುದನ್ನು ಆಲೋಚಿಸಿದಾಗ, ಹಗಲಿನಲ್ಲಿ ತಾಯಿ ದೈಹಿಕ ಶಕ್ತಿಯನ್ನು ವೃದ್ಧಿಸುವ ಕಾರ್ಯಮಾಡಿದರೆ, ರಾತ್ರಿಯಲ್ಲಿ ಕಲ್ಲೇಶನು ಮಗುವಿನ ಬೌದ್ಧಿಕ ಶಕ್ತಿಯನ್ನು, ಅಂತರಂಗದ ಶುದ್ಧಿಗೆ, ಬೆಳವಣಿಗೆಯ ಕಾರ್ಯ ಮಾಡುತ್ತಿರಬಹುದು ಅಂತರಂಗ ಶುದ್ಧಿಯೆಂಬುದು ಯಾರಿಗೂ ಕಾಣದು. ಆದ್ದರಿಂದಲೇ ಕವಿ ಧೂಪದ

ರಾಚೇಶನು ಕತ್ತಲೆಯಲ್ಲಿ, ಶಿವಸನ್ನಿಧಿಯಲ್ಲಿ ಮಗುವು ಬೆಳೆಯುವದನ್ನು ಚಿತ್ರಿಸಿದ್ದಾನೆ. ಮಗ್ಗುಲಲ್ಲಿ ಮಗುವಿಲ್ಲದ್ದನ್ನು ಕಂಡ, ತಾಯಿ ಕಲ್ಲಮ್ಮ ಹೆದರಿ, ಬೆವತು, 'ಸಿಡಲು ಸೋಂಕಿದ ಪ್ರಾಣಿ' ಹೇಗೆ ವಿಲವಿಲನೆ ಒದ್ದಾಡುತ್ತದೆಯೋ, ಹಾಗೆ ತನ್ನ ಕರುಳ ಕುಡಿ ಇಲ್ಲದ್ದಕ್ಕೆ ಪರಿತಪಿಸಿದಳು. ಬೊಮ್ಮಗೌಡ ಅದೃಶ್ಯವಾದ ಮಗುವನ್ನು ಅರಸುತ್ತಾ ಸಾಗಿ, ಊರಲ್ಲಿ ಡಂಗುರವನ್ನು ಸಾರಿದನು. ಕಲ್ಲಮ್ಮ 'ತಾ ಹೊತ್ತ ಹರಕೆಯನ್ನು' ನೆನೆಸಿಕೊಂಡು ತಾನು ಒಬ್ಬ ಸುತನ ಕರುಣಿಸಿದರೆ ನಿಮ್ಮಯಾ ಹೆಸರಿಡುವೆನೆಂದು ಹರಸಿಕೊಡಿರುವೆ' ಅಂಥ ಸತ್ಯಾಂಶವುಳ್ಳ ಕಲ್ಲೇಶನ ಅನುಗ್ರಹದಿಂದ ಜನಿಸಿದ ಮಗನಿಗೆ ನೀವು ನನ್ನ ಮಾತನ್ನು ಕೇಳದೆ 'ನಿಮ್ಮಯಾ ಮನೆ ದೈವವಂ ಏಳಿಗೆಯ ಮಾಡಿ ಪೆಸರಿಟ್ಟಿರಿಂ' ಇದರ ಫಲವಾಗಿಯೆ ಕಲ್ಲೇಶ ಮುನಿದು ಮಗುವನ್ನು ಅದೃಶ್ಯ ಮಾಡಿರವ ಸಾಧ್ಯತೆ ಇದೆ. ಹೀಗಾಗಿ ನೀವು ಕಲ್ಪುರಕೆ ಹೋಗಿ ಪರೀಕ್ಷಿಸಿ, ಎನಲು ಬೊಮ್ಮಗೌಡ ಹೋಗಿ ನೋಡಲು 'ಹೊಸ ಹೊನ್ನ ಪುತ್ಥಳಿಯಂತೆ ಎಸೆವ ಕಂದನ ಸುಖ ಹಾಗೂ ಆನಂದ'ವನ್ನು ಕಂಡು ಹರ್ಷದಿಂದ ತನ್ನೂರಿಗೆ ಕೊಂಡೊಯ್ದನು.

ಆದರೆ ಹಠಮಾರಿ ಕಲ್ಲೇಶ ದಿನವೂ ಇದೇ ಆಟವನ್ನು ಮುಂದುವರೆಸಿದ. ದಿನಗಳೆದಂತೆ ಬೆಳೆಯುತ್ತಾ ಸಾಗಿದ . ಮಗನಿಗೆ ಪರಿಪರಿಯಾಗಿ ಬೊಮ್ಮಗೌಡ 'ಆ ಕಲ್ಲಮ್ಮ' ಕರೆದರೆ ಹೋಗಬೇಡ ಎಂದು ಹೇಳಿದನು. ಮಗುವಾದಾಗಲೇ ಕಲ್ಲೇಶನ ಸಾಮಿಪ್ಯಕ್ಕೆ ಹದಗೊಂಡ ಬೊಮ್ಮಯ್ಯನ ಮನಸ್ಸು ತಂದೆ ಹೇಳಿದ ಯಾವ ಬುದ್ಧಿಯ ಮಾತುಗಳನ್ನು ಕೇಳಲಿಲ್ಲ.

ದನ ಕಾಯುವ ಸಲುವಾಗಿ ಹೊಲಕ್ಕೆ ಹೋದ ಬೊಮ್ಮಯ್ಯನನ್ನು ಮತ್ತೆ ಕಲ್ಲೂರಿಗೆ ಕರೆತಂದ ಕಲ್ಲೇಶ ಪಶುಗಳನ್ನೆಲ್ಲ ಅದೃಶ್ಯದಿಂದ ಮನೆ ಸೇರುವಂತೆ ಮಾಡಿದನು. ಇದರಿಂದ ಬೊಮ್ಮಗೌಡ ಕಾಡೆಲ್ಲ ಹುಡುಕಿ, ನಂತರ ಕಲ್ಲೇಶನ ಸನ್ನಿಧಿಯಲ್ಲಿ ಬೊಮ್ಮಯ್ಯನನ್ನು ಕಂಡು ಮತ್ತೆ 'ಈ ಮನೆ, ಮನೆವಾರ್ತೆ, ಧನ, ಧಾನ್ಯ ಎಲ್ಲವೂ ನಿನ್ನವೆ ನಿನಗೆ ಸುಂದರ ವನಿತೆಯನ್ನು ಕೊಟ್ಟು ಮದುವೆ ಮಾಡಿಸುವೆ' ಆ ಜಂಗಮ ಬಂದು ಕರೆದರೆ ಹೋಗಬೇಡ ಕುವರ. ಎಂದು ಪರಿಪರಿಯಾಗಿ ಬುದ್ದಿ ಹೇಳಿದನು. ಗುರುವಾಕ್ಯ ಕೇಳಿದ ಶಿಷ್ಯ, ಪ್ರಿಯನ ವಾಕ್ಯ ಕೇಳಿದ ಭಾರ್ಯಳು, ಜನನಿ,ಜನಕರ ಮಾತು ಕೇಳಿದ ಪುತ್ರರಿಗೆ ನರಕ ಪ್ರಾಪ್ತಿಯಾಗುತ್ತದೆಂದು' ಪರಿಪರಿಯಾಗಿ ಬುದ್ದಿ ಹೇಳಿದನು. ಬೊಮ್ಮನು ಪಶುಕಾಯಲೆಂದು ಹೊಲಕ್ಕೆ ಹೋದಾಗ ಮತ್ತೆ ಕಲ್ಲೇಶ ಕರೆದು ಹೇಳುತ್ತಾನೆ. ಬೊಮ್ಮಯ್ಯ

ಕೇಳೆನ್ನ 'ವಾಕ್ಯಮಂ ಬೊಮ್ಮಯ್ಯ ಈ ಪೊಲಂ

ಪಾಳಾಗದನಕ ನಿನ್ನಂ ಬಿಡಂ ಪೊಲನ ಸಸಿ

ಮೂಲಮಂ ಕಿತ್ತು ಬಿಸುಟೀಮಂದುಳಿದಂತೆನೆ ಹಸಾದವೆನುತಂಗೈಸಿ (೩-೩೬)

ಪ್ರಸಾದವೆಂದು ಸ್ವೀಕರಿಸಿದ ಬೊಮ್ಮಯ್ಯ ಈ ಕಾರ್ಯ ಪೂರೈಸಿದನು. 'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬಂತೆ ಬಾಲಕನಾದ ಬೊಮ್ಮಯ್ಯ ಸಮಾಜದಲ್ಲಿ ಬೇರೂರಿದ ಜಿಡ್ಡನ್ನು ಬೇರು ಸಮೇತವಾಗಿ ಕಿತ್ತಲು ಸಶಕ್ತ ಎಂಬುದರ ಸಂಕೇತವಾಗಿ 'ಸಸಿಯ ಮೂಲವನ್ನು ಕಿತ್ತು' ಎಂಬ ಮಾತನ್ನು ಬಳಸುತ್ತಾರೆ.

ಬೊಮ್ಮಗೌಡನ ವಿಚಾರಕ್ಕೂ, ಕಲ್ಲೇಶನ ವಿಚಾರಕ್ಕೂ ಭಿನ್ನತೆ ಕಂಡು ಬರುತ್ತದೆ. ಆ ಭಿನ್ನತೆಯೇ ಇಬ್ಬರಲ್ಲೂ ಜಗಳವನ್ನು ಹುಟ್ಟಿಸುತ್ತದೆ. ಹೀಗಾಗಿ ವೈಚಾರಿಕ ವೈರುಧ್ಯಗಳನ್ನು ಕಿತ್ತೆಸೆವ ಕೆಲಸವನ್ನು ಬಾಲಕ ನಿರ್ವಹಿಸಿದ್ದು, ಮುಂದೆ ಇಂಥ ವೈರುಧ್ಯತೆಗಳನ್ನೆಲ್ಲ ಮೆಟ್ಟಿ ನಿಂತು ಶಿವಧರ್ಮ ಸ್ಥಾಪನೆಗೆ ಪ್ರೇರಕವಾಯ್ತೆನ್ನಬಹುದು.

ಹೀಗೆ ಮಗನ ಅದೃಶ್ಯದ, ಜೊತೆಗೆ, ಬೆಳೆದ ಬೆಳೆಯೆಲ್ಲವೂ ಕಿತ್ತು, ಚೆಲ್ಲಾಡಿದ್ದನ್ನು ಕಂಡ ಬೊಮ್ಮಗೌಡನ ಕೋಪ ನೆತ್ತಿಗೇರಿ ಜಂಗಮನಿದ್ದ ಕಲ್ಪುರದೆಡೆಗೆ ಬಂದನು. ಕಲ್ಲೂರಿನ ಜನರಿಗೆ ನಿಮ್ಮೂರೊಳಗೆ ಇರುವ ತಿರುಕ ಜಂಗಮನಿಗೆ ಬುದ್ಧಿಯನ್ನು ಹೇಳಿ ಎಂದನು. ಇದಕ್ಕೆ ಸಕಲ ಜನರು ಚಿಂತಿಸಿ ಜಂಗಮ ರೂಪದ ಶಂಕರನನ್ನು ಕರೆದು ಬೊಮ್ಮಣ ಪ್ರಭು ಆರೋಪಿಸುವ ವಿಚಾರ, ನಿಮ್ಮಿಬ್ಬರಲ್ಲಿನ ಮಾತಿನ ಜಗಳ ನಮಗೆ ತಿಳಿಯದು, ಎಂದು ಎಲ್ಲ ವಿಚಾರವನ್ನು ಆಲಿಸಿ. ನಂತರ ಪರೀಕ್ಷಿಸಲು ಹೊಲಕೆ ಹೋಗುತ್ತಾರೆ. ಬೊಮ್ಮಗೌಡನ ಆರೋಪವೆಲ್ಲ ಸುಳ್ಳು ಎಂದು ನಿರ್ಣಯವಾಗುತ್ತದೆ. ಏಕೆಂದರೆ ಒಂದೂ ಬೆಳೆಯಿಲ್ಲದ ಭೂಮಿ ಇವರು ಹೋಗಿ ನೋಡಲು ಸಂಪದ್ಭರಿತವಾಗಿ ಬೆಳೆದುನಿಂತಿತ್ತು. ಆಗ 'ನರೆಯಗಲ್ಲಿನ ನ್ಯಾಯದ ಕಟ್ಟೆ'ಯಲ್ಲಿ ನ್ಯಾಯ ನಿರ್ಣಿತಗೊಂಡ ಬಾಲಕ ಕಲ್ಲೇಶ್ವರನ ವಶವಾಗುವನು. ಇಂದಿಗೂ ಕೂಡ ಕಲ್ಲೇಶ್ವರನ ದೇವಾಲಯದ ಹೊರಭಾಗದಲ್ಲಿ 'ನ್ಯಾಯದ ಕಟ್ಟೆ' ಇದೆ. ಹೀಗೆ ಕಲ್ಲೇಶನ ವಶವಾದ ಮೊಲ್ಲೆಬೊಮ್ಮಯ್ಯ ಕಲ್ಲೇಶನ ಸೇವೆಯಲ್ಲೆ ನಿರತವಾಗುತ್ತಾನೆ.

ಮೊಲ್ಲೆಬೊಮ್ಮಯ್ಯನ ಸೇವೆ, ಮದುವೆಯ ಪ್ರಸಂಗಗಳು ಬರುತ್ತವೆ. ನಡುಗನ್ನಡ ಕಾಲದಲ್ಲಿ 'ಭಕ್ತಿ' ಎಂಬುದು ಮಹತ್ವವನ್ನು ಪಡೆದು, ಪ್ರತಿಯೊಬ್ಬ ವ್ಯಕ್ತಿಯು ಒಂದು ಕಾರ್ಯದಲ್ಲಿ ತೊಡಗುವದು ಅವರ ಉದ್ದೇಶವಾಗಿತ್ತು. 'ಕಾಯಕವೇ ಕೈಲಾಸ' ಎಂಬಂತೆ ಮೊಲ್ಲೆಬೊಮ್ಮಯ್ಯ ಶಿವ ಸೇವೆಯಲ್ಲಿ ತೊಡಗಿದನು. ಆತ ನಿರ್ವಹಿಸಿದ ಸೇವೆಯನ್ನೆ ನಾವು ಅಧ್ಯಯನದ ಅಗತ್ಯಕ್ಕಾಗಿ ಹೀಗೆ ವಿಭಾಗಿಸಿಕೊಳ್ಳಬಹುದು

ಹೂವು ಪತ್ರೆ ಅರ್ಪಣೆ ಹಾಗೂ ವೀಣೆ ನಡಿಸಿ, ಭಕ್ತಿ ಸಮರ್ಪಣೆ.

ಉದಯದಲ್ಲಿ ಎದ್ದು ಹೂದೋಟಕ್ಕೆ ಬಹು ವಿನಯದಿಂದ ಹೋಗಿ, ಬಹು ಸುವಾಸಿತವಾದ. ಪುಷ್ಪವನ್ನು ಕಲ್ಲೇಶನಿಗೆ ಅರ್ಪಿಸುತ್ತ,ತನ್ನ ಭಕ್ತಿ ಸಮರ್ಪಿಸುತ್ತಿದ್ದನು. ಕವಿ ಧೂಪದ ರಾಚೇಶನು ಬಳಸಿರುವಂಥ ತೋಟ, ಹೂವಿನ ವರ್ಣನೆ ಎಲ್ಲವು 'ಹರಿಹರನ ಪುಷ್ಪರಗಳೆಯನ್ನು ಹೋಲುತ್ತದೆ. ರವಿ ಉದಯಿಸುವ ಪೂರ್ವದಲ್ಲಿ, ಗಾಳಿ ಬಂದು ಸೋಂಕುವ ಪೂರ್ವದಲ್ಲೆ, ಹೋಗಿ ಆ ಹೂವುಗಳನ್ನು ತಂದು ಕಲ್ಲೇಶನಿಗೆ ಅರ್ಪಿಸುತ್ತಿದ್ದನು. ನಂತರದಲ್ಲಿ ಮೊಲ್ಲಬೊಮ್ಮಯ್ಯನಿಗೆ ಕಲ್ಲೇಶ್ವರನೇ ಒಂದು ಕಾಯಕವನ್ನು ಒಪ್ಪಿಸುತ್ತಾನೆ. ಅದೇನೆಂದರೆ ವೀಣೆ ನುಡಿಸುವ ಕಾಯಕ. ಈ ಕಾಯಕದಲ್ಲಿ ಬೊಮ್ಮಯ್ಯ ತೃಪ್ತಿಯಿಂದ ಇರುತ್ತಾನೆ. ಪೂಜಾ ಮಾಡುವ ವಿಧಾನವನ್ನು ಇಲ್ಲಿ ಹೀಗೆ ಉಲ್ಲೇಖಿಸಿದ್ದಾರೆ. ಬೊಮ್ಮಯ್ಯ 'ಭಸಿದ ಗಂಧಾಕ್ಷತೆಯನಂದಿಟ್ಟು ಪುಷ್ಪಪತ್ರೆಗಳಿಂದ ಅಲಂಕರಿಸಿ ಧೂಪಂ, ದೀಪಬೆಳಗಿ ನೈವೆದ್ಯ ತಾಂಬೂಲವನ್ನು ಅರ್ಪಿಸುವನು.

ಸತತ ಮೊಲ್ಲೆಯ ಕುಸುಮ

ವಂತಂದು ಕಲ್ಲೇಶಗರ್ಪಿಸು ತಿರತ್ಕೆಯ

ತ್ಯಂತ ಹರುಷದಿ ಮೆಚ್ಚಿ ಮೊಲ್ಲೆ ಬೊಮ್ಮಯ್ಯ ನೆಲದೆನಿಪ ಅಭಿಧಾನವಿತ್ತ.(೪-೮)

ಹೀಗೆ ಬೊಮ್ಮಯ್ಯನಿಗೆ 'ಮೊಲ್ಲೆ' ಎಂಬ ವಿಶೇಷಣ ಬಂದಿತು. ನಂತರದಲ್ಲಿ ಕಲ್ಲೇಶ ವೀಣೆ ನುಡಿಸುವ ಕಾಯಕವನ್ನು ಬೊಮ್ಮಯ್ಯನಿಗೆ ಕೊಟ್ಟನು. ಆ ಕಾಲದಲ್ಲಿ ಇದೊಂದು ವಿಶಿಷ್ಟ ಪದ್ಧತಿಯೇ ಆಗಿ ಬೆಳದಿರಬಹುದಾದ ಸಾಧ್ಯತೆ ಇದೆ. ಏಕೆಂದರೆ ಅದೇ ಕಾಲದ ಶಂಕರ ದಾಸಿಮಯ್ಯನಿಗೆ ಜಡೆಶಂಕರನು ಒಂದು 'ಕಾಯಕ' ಕೊಡುತ್ತಾನೆ. 'ಕಾಯಕ' ಎಂಬುದು ಸ್ವಂತ ಆಯ್ಕೆ ಆಗಿರಲಿಲ್ಲ. ವ್ಯಕ್ತಿಯ ಮನಃಸ್ಥಿತಿ, ವ್ಯಕ್ತಿತ್ವ, ಸ್ವಭಾವ ನೋಡಿ, ಗುರು ನಿರ್ದೇಶನ ಮಾಡುತ್ತಿದ್ದುದು ಆ ಕಾಲದ ವಿಶೇಷವೇ ಆದುದಾಗಿದೆ. ಶ್ರದ್ಧೆಗೆ ಕಾರಣವಾದ ಧರ್ಮ, ಬದುಕಿನಲ್ಲಿ ಕಾಣುವ ವಾಸ್ತವ್ಯ ಎರಡನ್ನು ಕೂಡುವ ಪ್ರಯತ್ನವನ್ನುಕವಿ ಮಾಡಿರುವದು ಕಂಡು ಬರುತ್ತದೆ.

**ಎರಡನೆಯ ಘಟ್ಟ**

'ಉಂಡುಪವಾಸಿಯಾಗು ಬಳಸಿ ಬ್ರಹ್ಮಚಾರಿಯಾಗು' ಎಂಬಂತೆ ಹುಟ್ಟಿದ ಪ್ರತಿಯೊಬ್ಬನು ಮದುವೆಯಾಗಲೇ ಬೇಕು. ಶರಣ ಧರ್ಮ ಪಾಲನೆಯೆಂದರೆ ಸನ್ಯಾಸತ್ವದ ಆಚರಣೆಯಲ್ಲ. ಕಮಲವು ಹೇಗೆ ಕೆಸರಿನಲ್ಲಿದ್ದರೂ, ಆ ಕೆಸರನ್ನು ಸ್ವಲ್ಪವೂ ಅಂಟಿಕೊಳ್ಳದಂತೆ ಸುಂದರವಿರುತ್ತದೆಯೋ, ಹಾಗೆಯೇ 'ಮನುಷ್ಯ ಭವಸಾಗರದಲ್ಲಿದ್ದೂ, ಅದರ ಜಿಡ್ಡು ಅಂಟದಂತೆ ಬಾಳುವದೇ, ಶರಣನ ನಿಜವಾದ ಧರ್ಮ. 'ಎಣ್ಣೆ ಉಸುಬಿಯೊಳಗೆ ಅಡಗಿರುವಂತೆ' 'ಹೊನ್ನು, ಮಣ್ಣು, ಹೆಣ್ಣನ್ನು ಹಿಡಿದು ಭಕ್ತನಾಗಿ' 'ಗುರು-ಲಿಂಗ-ಜಂಗಮ' ಸೇವೆ ಮಾಡಲು ಸಾಧ್ಯ. ಅದಕ್ಕಾಗಿ ನೀನು ಮದುವೆಯಾಗಲೇಬೇಕು. ಎಂದು ಗುರು ಒತ್ತಾಯಿಸುತ್ತಾನೆ. ತನಗೆ ತಂದೆ-ತಾಯಿ, ಬಂಧುಬಳಗ, ಸದನ, ಧನ-ಧಾನ್ಯ ಯಾವುವೂ ಇಲ್ಲದ ತನಗೆ ಕನ್ಯೆ ಕೊಡುವರೇ ಎಂದಾಗ? ಮೈಗುಂಡಿಯ ಕಾಮರಾಜನ ಹಿರಿಯಮಗಳಾದ ಪಂಪಾಯಿಯನ್ನು ಕೇಳು, ನಿನಗೆ ಹೆಣ್ಣು ಕೊಡುವರು ಎನ್ನುತ್ತಾನೆ.

ಆಗ ಸಿಂಧ ಅರಸನ ಕಡೆಗೆ ಬಂದು 'ಭೂಪತಿಯೆ ನಿನ್ನ ತನುಜಾತೆಯನ್ನು ಎನಗೆಂದು ಬೇಡುವೆ ದಿಟ್ಟಿಸಿರಿ' ಎನ್ನುತ್ತಾನೆ. ಅರಸನು ಭೂಮಿಯಲ್ಲಿಯೇ ರಾಜಸದನಕೆ ಈ ಪರಿಯಲ್ಲಿ ಹೆಣ್ಣು ಕೇಳಲು ಬಂದಿರುವದು ಇದೇ ಮೊದಲು. ಎನ್ನುತ ತಮ್ಮೊಳಗೆ ಆಶ್ಚರ್ಯವನ್ನು ಪಟ್ಟರು. ಕೆಲವರು ನಗುತ್ತ ಅಪಹಾಸ್ಯ ಮಾಡಿದರು, ಕೆಲವರು, ಜರಿಯುತ್ತ ಕುಲವೇನು ಎಂದು ಹಾಸ್ಯ ಮಾಡುತಾರ್ತೆ. ನಿಮಗೆ ಮಾತೆ-ವರ ಪಿತೃ, ಮಿತ್ರಗಳ ಹೆಸರು ಏನು? ಎಂದು ಕೇಳಲು ಅರಸ ಕೇಳು 'ನನಗೆ ಜನನಿ, ಜನಕ, ಬಂಧು ಎಲ್ಲವೂ ಕಲ್ಲೇಶ್ವರನೇ, ನಿನ್ನ ಕುವರಿಯನ್ನು ಬೇಡು ಪೋಗೆಂದೆರಿದು ಕಳುಹಿಸಿದನೆನಲು ನೃಪನು ಮನದೊಳಗೆ ಹೆದರಿದನು'. ದೇವರೆಂದರೆ ಎಲ್ಲರಿಗೂ ಭಯವೇ, ಕಲ್ಲೇಶ್ವರ ತನ್ನನ್ನು ಕಳಿಸಿದನೆಂದು ಹೇಳಿದ ತಕ್ಷಣವೇ ರಾಜನಿಗೆ ಭಯ ಆವರಿಸುತ್ತದೆ.

ದೈವದ ಬಗೆಗಿನ ಭಯ, ಭಕ್ತಿ, ನಂಬಿಕೆ, ಆಚಾರಣೆಗಳೇ ವ್ಯಕ್ತಿಯಲ್ಲಿ ಭಯವನ್ನು ಮೂಡಿಸುತ್ತವೆ ಬಳಿಕ ಮನವಿಲ್ಲದ ಮನಸ್ಸಿನಿಂದ ಕಾಮರಾಜನು ತನ್ನ ಕುವರಿಯರನ್ನೆಲ್ಲ ತೋರಿಸಲು ಕರೆಸಿದನು. ಸೌಂದರ್ಯ ಸಿರಿಯಿಂದ, ಅಪ್ಸರೆಯನ್ನು ಹೋಲುವ ಸೌಂದರ್ಯ ಹೊಂದಿದ ಹೆಣ್ಣುಗಳು ಬೊಮ್ಮಯ್ಯನನ್ನು ನೋಡಿ ಜರಿದರು. 'ನೋಡು ಇವರಲ್ಲಿ ಯಾರು ನಿನ್ನ ಮನಕ್ಕೆ ಒಪ್ಪುವರೋ, ಅವರನ್ನೆ ನಿನಗೆ ಕೊಡುವೆ ಎಂದನು ಅರಸ. ಕಲ್ಲೇಶನು ಹೇಳಿದಂತೆ ತೋರಿಸಿದ ಹೆಣ್ಣುಗಳಲ್ಲಿ 'ಪಂಪಾಯಿಯೆಂಬವಳನ್ನು ಕೇಳಲು ಆಕೆ ಹಾಸ್ಯದಿಂದ ಹೀಗೆ  ಜರಿಯುತ್ತಾಳೆ.

'ಮರಳು ಆವರಿಸಿದೆಯೋ, ಹುಚ್ಚು ಹುಟ್ಟಿತೊ, ಮುಗ್ಧನೋ, ಹಿಂದು ಮುಂದಿಲ್ಲದ  ಪರದೇಶಿಯೋ ಎಂದು ಜರಿದಳು. ಇದನ್ನು ಕೇಳಿದ ಬೊಮ್ಮಯ್ಯ 'ಶಿವಶಿವಾ' ನನ್ನ ಮನದಲ್ಲಿ 'ಇನಿತು ಹೆಣ್ಣಿನಾಸೆ'ಯಿಲ್ಲ ನೀನು ನನ್ನ ಕಳಿಸಿದೆ, ಏನು ನಿನ್ನ ಲೀಲೆ ಎಂದು ಕಲ್ಲಿನಾಥನನ್ನು ನೆನೆಯುತಿರಲು, ಕಲ್ಲೇಶ್ವರನು ಭೂವಲ್ಲಭನ ಅರಮನೆಯಲ್ಲಿ ಮಾಯದ ಅಗ್ನಿಯನ್ನು ಹೊತ್ತಿಸಿದನು. ಯಾರು ತಿಳಿಯದಂತೆ ಬೆಂಕಿಯುಧಗಿಲೆನುತ ಉರಿಯ ಹತ್ತಿತು ಎತ್ತರಕೆ. ಇಡೀ ಊರಿನ ತುಂಬೆಲ್ಲ ಹಾಹಾಕಾರ ತುಂಬಿತು. ಪಶು, ಶಿಶು, ಸತಿ, ಎಲ್ಲರೂ ಒಗ್ಗೊರಳಿಂದ ಕೂಗ ತೊಡಗಿದರು. ಸಾಯುವ ನಮ್ಮನ್ನು ರಕ್ಷಿಸಿ, ನೀರನ್ನು ಸುರಿಯಿರಿ ಎಂದು ಕೂಗಾಡತೊಡಗಿದರು. ನಾನಾಪರಿಯಿಂದ ಉರಿಯನ್ನು ತಣಿಸಲು ಪ್ರಯತ್ನಿಸಿದರೂ, ಸಾಧ್ಯವಾಗಲಿಲ್ಲ. ಹಾಗಾಗಿ ಅರಸ ಬೊಮ್ಮಯ್ಯನನ್ನು ಹುಡಕಿ ದೈನ್ಯದಿಂದ ಅವನನ್ನು ಬೇಡಿ ಅರಮನೆಗೆ ಆವರಿಸಿದ ಉರಿಯನ್ನು ತಣಿಸಲು ಬೇಡಿಕೊಂಡನು. ಬೊಮ್ಮಯ್ಯ ಎಲ್ಲಿಯ ಅರಮನೆ, ಎಲ್ಲಿಯ ಉರಿ ಯಾವ ಕಾರಣಕ್ಕೆ ಉರಿ ಹತ್ತಿತು, ಎನಲು ಪಂಪಾಯಿ ನಿಮ್ಮನ್ನು ಜರಿದ ಕಾರಣ ಉರಿಹತ್ತಿದೆ. ದಯವಿಟ್ಟು, ಅದನ್ನು ಪರಿಹರಿಸಿ, ತಾವು ಕೇಳಿದ ಪಂಪಾಯಿಯನ್ನು ವಿವಾಹ ಮಾಡಿಸುವೆ ಎನಲು, ಬಿಸಿಲು ಆವರಿಸಲು ಮುಸುಕಿದ ಮಂಜಿನ ಮುಗಿಲು ಓಡಲು, 'ಪೂರ್ವದ ಸೂರ್ಯ ಬರಲು, ಧರಣಿಯನ್ನಾವರಸಿದ ನಿಶೆ ಓಡುವಂತೆ 'ಬೊಮ್ಮಯ್ಯಬರಲು ಉರಿಯು ಬಯಲಾಯ್ತು' ಇದರಿಂದ ಪುರಜನವೆಲ್ಲ ಜಯಕಾರವನ್ನು ಹಾಕಿದರು.

ನಂತರ ಭೂಪಾಲ ತನ್ನ ಮಗಳನ್ನು ಬೊಮ್ಮಯ್ಯನಿಗೆ ಕೊಟ್ಟು ಸುಮೂಹರ್ತದಲ್ಲಿ ಮದುವೆಯನ್ನು ಮಾಡಿದರು. ಅತೀ ಸಂಭ್ರಮ, ಸಡಗರದಿಂದ ಇಡೀ ಊರೇ ಹೊಸ ಮದುವಣಗಿತ್ತಿಯಂತೆ ಸಿಂಗರಿಸಲ್ಪಟ್ಟಿತು. ಹೀಗೆ ವಿಜೃಂಭನೆಯಿಂದ ವಿವಾಹವು ನೆರೆವೇರಿತು. ಕಲ್ಬುರಕೆ ಪಂಪಾಯಿಯನ್ನು ಕರೆತಂದನು. ತನ್ನ ಕಾಯಕ ವೀಣೆ ನುಡಿಸುವದನ್ನು ಮತ್ತೆ ಮುಂದುವರಿಸಿದನು.

ವೀಣೆ ನುಡಿಸುವದನು ಕೇಳಿದ 'ಚೌಂಡರಸನು' ಬೊಮ್ಮಯ್ಯನನ್ನು ಕರೆತರಲು ಕಳುಹಿದನು.ಅರಸು ಕರೆದುದನ್ನು ಲೆಕ್ಕಿಸದೆ,  ಅತೀ ಗರ್ವದಿಂದ ಇರುವ ಕಾರಣವೇನು? ಎಂದು ಅವನ ಎಳೆತರಲು ಹೋದರೂ ಸಾಧ್ಯವಾಗಲಿಲ್ಲ.

ಬೊಮ್ಮಯ್ಯನ ಕೈಹಿಡಿಯಲು 'ತಂತಿಯ ಮೀಟುವ ಬೆರಳು ನಿಲ್ಲಲಲ್ಲ, ಬೆರಳ ಹಿಡಿದಡೆ ತನ್ನಿಂದ ತಾನೆ ವೀಣೆ ನುಡಿಯುತಲಿಹುದು. ಹಾಡುವ ಹಾಡ ನಿಲ್ಲಸಿದರೆ, ದೇಗುಲವೇ ಹಾಡತೊಡಗಿತು. ಹೀಗೆ

ಜನರೆಲ್ಲ ಆಶ್ಚರ್ಯ ಚಕಿತರಾದರು . ಅರಸ ಕರೆದರೆ ಬರದ ಬೊಮ್ಮಯ್ಯನಿಗೆ ಬುದ್ಧಿ ಕಲಿಸುವ ಸಲುವಾಗಿ 'ಚೌಲದಬಂಟ'ನೆಂಬ ಮಂತ್ರವಾದಿಯನ್ನು ಮೊರೆಹೊಕ್ಕನು. ಅವನು ಹಲವಾರು ತಾಪತ್ರಾಯಗಳನ್ನು ನೀಡಿದರೂ, ಬೊಮ್ಮಯ್ಯ ಅಲುಗಾಡಲಿಲ್ಲ. ಕೊನೆಗೆ ಅರಸನೆ ಶರಣಾಗತನಾಗಿ ಕಲ್ಲನಾಥನಿಗೆ ದಾನವಿತ್ತು ಶಾಸನ ಹಾಕಿಕೊಟ್ಟನು. ಆದರೆ ಈ ಶಾಸನ ದೊರೆತಿಲ್ಲ.

**ಆನಂತರದ ಘಟ್ಟ**

ಮೊಲ್ಲೆಬೊಮ್ಮಯ್ಯನ ಕಾವ್ಯವು ಬಸವಣ್ಣನವರ ಜನನ, ಹರಳಯ್ಯ, ಮಧುವರಸರು ಬೀಗರಾದದು, ಎಳಹೂಟೆ ಶಿಕ್ಷೆ, ಶರಣರ ವಧೆ, ಬಿಜ್ಜಳನ ವಧೆ ಹೀಗೆ ಪ್ರಮುಖ ಘಟನೆಗಳನ್ನು ಆಧರಿಸಿದೆ.

ಕೈಲಾಸದಲ್ಲಿ ಹೂವುಗಳನ್ನು ಹಂಚುವಾಗ ಷಣ್ಮುಖನಿಗೆ ಕೊಡದೆ, ಕೊಟ್ಟೆನೆಂದು ಹೇಳಿದ ವೃಷಭ ಮುಖನೆ ಬಸವಣ್ಣನಾಗಿ, ಮಾದರಸ–ಮಾದಲಾಂಬಿಕೆಯರ ಮಗನಾಗಿ ಜನಿಸಿದನು. ತಂದೆ ಏರ್ಪಡಿಸಿದ ಉಪನಯನವನ್ನು ತಿರಸ್ಕಿರಿಸಿ, ಸಂಗಮೇಶ ರೂಪಲಿಂಗದ ಆದೇಶದ ಮೇರೆಗೆ ಕಲ್ಯಾಣಕ್ಕೆ ಹೋದನು. ಅರಸನ ಕರಣಿಕರು ತಪ್ಪಿದ ಲೆಕ್ಕವನ್ನು ಸರಿಪಡಿಸಿದ ಕಾರಣ ಬಿಜ್ಜಳನ ಮಂತ್ರಿಯಾದನು. ಮುಂದೆ ಸಿದ್ಧರಸನ ಮಗಳಾದ ನೀಲಮ್ಮನನ್ನು ವಿವಾಹವಾದ. ಹೀಗೆ ಹಲವಾರು ಪವಾಡಗಳನ್ನು ಮೆರೆದ ಬಸವಣ್ಣನವರ ಚರಿತೆಯನ್ನು ಕಲ್ಲೇಶ್ವರನು ಬೊಮ್ಮಯ್ಯನಿಗೆ ಹೇಳಿ, ಇಂಥ ಮಹಾಶರಣರನ್ನು ಕೂಡಿಕೊಳ್ಳಲು ಕಲ್ಯಾಣಕ್ಕೆ ಹೋಗಲು ಆದೇಶಿಸಿದನು. ಕಲ್ಯಾಣದ ಈ ಸೂಚನೆ ತಿಳಿದ ಬೊಮ್ಮಯ್ಯ ತನ್ನ ಮಗನಾದ 'ಕಲಿದೇವೊ ಡಿಯ'ನನ್ನು ಕಲ್ಲಿನಾಥನಿಗೆ ಒಪ್ಪಿಸಿ, ಕಲ್ಯಾಣದತ್ತ ಹೊರಟನು. ಅಲ್ಲಿ ಹಳ್ಳಯ್ಯ, ಮಧುವರಸರ ಕಥೆ ಕೇಳಿದನು. ಹರಳಯ್ಯ ತಂದ ಚೆಮ್ಮಾವುಗೆಯನ್ನು ಮೆಟ್ಟಿ, ನರಕಯಾತನೆ ಮಧುವರಸ ಅನುಭವಿಸಿದನು. ಹಾಗೆಯೇ ಕುಷ್ಟರೋಗದಿಂದಲೂ, ಬಳಲಿದನು.

ಒಂದು ದಿನ ಶಿವನ ಕೃಪೆಯಿಂದೆಂಬಂತೆ ದಾಸಿ ಹರಳಯ್ಯನ ಮನೆಯ ಬಚ್ಚಲದ ನೀರನ್ನು ತಂದು, ಮಧುವರಸನು ಸ್ನಾನ ಮಾಡಲು ಅವನ ಪಾಪವೆಲ್ಲ ಪರಿಹಾರವಾಯ್ತು. ಮಗಳು ಮಾದೇವಿಯೊಂದಿಗೆ ಹರಳಯ್ಯನ ಮನೆಗೆ ಬಂದು 'ಎನ್ನಾತ್ಮವನ್ನು ಶುದ್ಧ ಮಾಡಿದ ಗುರುವೇ ಎಂದು ಕೈಮುಗಿದು ನಿಮ್ಮ ಭಕ್ತಿ ಹಿರಿದು, 'ನನ್ನ ಸುತೆಯನ್ನು ನಿಮ್ಮ ಸುತನಿಗೆ ಕೊಟ್ಟು ವಿವಾಹಮಾಡಿ' ಇಬ್ಬರೂ 'ಬೀಗ'ರಾಗುವ ವಿಚಾರ ಹೇಳಿದ. ಲಿಂಗದೀಕ್ಷೆಯನ್ನು ಪಡೆದ ಇಬ್ಬರೂ ಸಮಾನರು. ಯಾರು ಮೇಲಲ್ಲ, ಯಾರು ಕೀಳಲ್ಲ. ಹೀಗಾಗಿ ಇಬ್ಬರೂ ಒಂದೇ ಕುಲದವರಾದರು ಅದೇ ಶರಣಕುಲ. 'ಪರಿವರ್ತನೆ' ಎಂಬುದು ಒಂದೇ ಸಾರಿ ಬರುವಂಥದ್ದಲ್ಲ. ಹಾಗೂ ಬದಲಾವಣೆ ಅಷ್ಟು ಬೇಗನೆ ಒಪ್ಪುವಂಥದಲ್ಲ. ಧರ್ಮ ವಿರೋಧಿಗಳು ಉನ್ನತ ಕುಲದವರೆನಿಸಿಕೊಂಡ ಮಂಚಣ್ಣನಂಥ ಬ್ರಾಹ್ಮಣರು ಪ್ರತಿಲೋಮ ವಿವಾಹದಿಂದ ತಮ್ಮ ಧರ್ಮ ಹಾಳಾಯ್ತೆಂದು ಅರಸನಲ್ಲಿ ಮೊರೆಯಿಟ್ಟು ಚಾಡಿ ಹೇಳಿದರು. ಇದರಿಂದ ಬಿಜ್ಜಳನು ಹರಳಯ್ಯ ಮಧುವರಸರ ಕಣ್ಣು ಕೀಳಿಸಿ, ಎಳ ಹೂಟೆಗೆ ಕಟ್ಟಿ ಎಳಸಿದನು. ನಂತರ ಶೂಲಕ್ಕೇರಿಸಿದನು.

ಈ ಎಲ್ಲ ಶರಣವಧೆಯನ್ನು ನೋಡಲಾಗದೆ, ಮನೆಗೆ ಬಂದ ಜಗದೇವ ವಿಷಯವನ್ನು ತಾಯಿಗೆ ತಿಳಿಸಿದಾಗ, ತಾಯಿ ಮಹಾದೇವಿ 'ಶಿವಭಕ್ತರಿಗಾದ ಹಿಂಸೆಯನ್ನು ಕೇಳಿಯೂ ಸುಮ್ಮನಿರುವುದು ಸರಿಯಲ್ಲ.'

ನೀನು 'ಶರಣವಧೆ'ಯನ್ನು ನೋಡಿ ಬಂದ ಕಾರಣ 'ನಿನ್ನ ಬದುಕು ವ್ಯರ್ಥ ನಿನ್ನ ಬಾಳು ನಾಯಿಯ ಪಾಡು' ಎಂದು ಅನ್ನವನ್ನು ನೆಲಕ್ಕೆ ಹಾಕುತ್ತಾಳೆ. ಮಂಡೆಗಾಲೂರಿ ಅನ್ನ ತಿನ್ನಿತಿರಲು, ಮೊಲ್ಲೆಬೊಮ್ಮಯ್ಯನು ಬಂದು ಜಗದೇವನನ್ನು ಕೂಡಿಕೊಂಡು. ನೀ ಮಾಡುವ ಕಾರ್ಯಕ್ಕೆ ನಾನು ಹೆಗಲಗೂಡಿಸುವೆ ಎನ್ನುತ್ತಾನೆ. ಆದರೆ ಜಗದೇವ ನೀನು ಶರಣರ 'ವಧೆಯನ್ನು ಕೇಳಿದವನು ಅಲ್ಲ, ನೋಡಿದವನೂ ಅಲ್ಲ, ನೀನೆಕೆ ಬಿಜ್ಜಳನ ಕೊಲ್ಲುವೆ ಎನಲು, ತಾನು ಭೂಲೋಕದಲ್ಲಿ ಜನಿಸಿದ್ದ 'ಶರಣರ ರಕ್ಷಣೆಗಾಗಿ, ಶರಣದ್ರೋಹಿಯ ಕೊಲೆಗಾಗಿ' ಈ ಕಾರ್ಯ ಸಿದ್ಧಿಗಾಗಿ ಎಂದೆನ್ನುತ್ತಾನೆ. ಪ್ರಾಚೀನ ಕಾವ್ಯಗಳನ್ನು ಅವಲೋಕಿಸಿದರೂ ಮಹದೇವಿಯಂಥ ಪಾತ್ರವನ್ನು ನಾವು ಹಿಂದೆಯೂ ಕಾಣುತ್ತೇವೆ. ಶಿವಾಜಿಯ ಸಾಧನೆಗೆ ಪ್ರೇರಕ ಶಕ್ತಿಯಾದವಳು ತಾಯಿ ಜೀಜಾಬಾಯಿ ಎಂಬುದನ್ನು ನಾವು ಮರೆಯುವಂತಿಲ್ಲ. ಹೀಗೆ 'ಬಿಜ್ಜಳನವಧೆ'ಯನ್ನೆ ತಮ್ಮ 'ಜೀವನದ ಪರಮಗುರಿ'ಯೆಂದು ಸಾಧಿಸಲು ಹೊರಟ ಇಬ್ಬರೂ ಚನ್ನಬಸವಣ್ಣನವರು ನೀಡಿದ ಅಲಗುಗಳನ್ನು ದೀವಟಿಗೆಯ ಒಳಗೆ ಇಟ್ಟುಕೊಂಡು 'ಪರವಾದಿಗಳನ್ನು ಕೊಲ್ಲುವ' ಪ್ರತಿಜ್ಞೆ ಮಾಡಿದರು.

ಸ್ನೇಹಿತರಿಬ್ಬರೂ ಜೊತೆಗುಡಿ ದೀವಟಿಗೆಯನ್ನು ಹಿಡಿದು, ಅರಮನೆ ಪ್ರವೇಶಿಸಿ. ಉಚಿತ ಸಮಯ ಸಾಧಿಸಿ, ರೋಷದಿಂದ ರುದ್ರಾವತಾರವನ್ನು ತಾಳಿ, 'ಈಶನಿಂದಕ ಭಕ್ತ ಕೊಲೆಯ ಮಾಡಿದವ' ಎನ್ನುತ್ತ ಆರ್ಭಟಿಸುತ್ತಾ, ದೀವಟಿಗೆ ಒಳಗಿನ ಅಲಗನ್ನು ತೆಗೆದು, ಬಿಜ್ಜಳನ ಉದರದಲ್ಲಿ ಇರಿಯಲು ಬಿಜ್ಜಳ ಕುಸಿದು ಬಿದ್ದ ಮೇಲೇಳದಂತೆ, ಅವನ ಒಡಲನ್ನು ಸೀಳಿ, ಭಕ್ತ ಕೊಲೆಯನ್ನು ಪೂರೈಸಿದೆವೆಂಬ ಸಂತೋಷದಿಂದ ಅರಮನೆಯಿಂದ ಹೊರಟು ನಗರದಲ್ಲೆಲ್ಲ ಸಾರಿದರು. ಪುರಜನರು ಜಯ ಜಯಕಾರ ಹಾಕಿದರು. ವಿಜಯಶಾಲಿಯಾಗಿ ಮನೆಗೆ ಬಂದ ಮಕ್ಕಳಿಬ್ಬರನ್ನು ತಾಯಿ ಮಾದೇವಿಯು ಪ್ರೀತಿಯಿಂದ, ಆರತಿ ಎತ್ತಿ, ದೃಷ್ಟಿ ತೆಗೆದು ಅಲ್ಲೇ ಸಂತೋಷದಿಂದ ಆಲಂಗಿಸಿದಳು,

ಇಂದು ನಿಮ್ಮಯ ಭಾಷೆ ಬಂದುದು

ಇಂದು ನಿಮ್ಮಯ ಪಾಪ ಹರಿಯಿತು

ಇಂದು ಭಕ್ತರ ಆಳನಾಳೆಂಬುವ ಬಿರುದು ನಿಮಗೆ (೧೭-೬೩)

ಎಂದಳು. ಸುರರು ದುದುಂಭಿಗಳನಾದಗೈದು, ಜಯ ಜಯಕಾರ ಹಾಕಿದರು. ಬಳಿಕ ಮಹಾದೇವಿ ಜಗದೇವ, ಮೊಲ್ಲೆಬೊಮ್ಮರಿಗೆ ಜಳಕವನ್ನು ಮಾಡಿಸಿ, ಲಿಂಗಾರ್ಚನೆಯನ್ನು ಮಾಡಿ, ಥಳಥಳಿಸುವ ಹರಿವಾಣದಲ್ಲಿ ದೇವಾನ್ನವನು ಉಣ ಬಡಿಸಿದಳು. ಸಂತೋಷದಿಂದ ಹೀಗಿರಲು ಪುಷ್ಪಕ ವಿಮಾನದಲ್ಲಿ ಶಿವ ಬಂದು ಇವರನ್ನು ದೇವಲೋಕಕ್ಕೆ ಹೊತ್ತೊಯ್ದನು. ಹೀಗೆ ಈ ಕೃತಿ ಶರಣನೊಬ್ಬನ ವೃತ್ತಾಂತವನ್ನೊಳಗೊಂಡು, ಪೂರಕವಾಗಿ ಹಲವಾರು ಶರಣರ ಚರಿತ್ರೆಯನ್ನು ಕಟ್ಟಿಕೊಡುತ್ತದೆ.

ಹೀಗೆ ಒಳಗೊಂಡಿರುವ 'ಕಥಾಸ್ವರೂಪ'ವೂ ನಮ್ಮನ್ನು ನಡುಗನ್ನಡ ಕಾಲಘಟ್ಟಕ್ಕೆ ಕರೆದೊಯ್ಯುತ್ತದೆ. ಕವಿಯ ಕಾಲ, ಸ್ಥಳದ ನಿದಿಷ್ಟತೆಯನ್ನು ಅಳೆಯುವಲ್ಲಿ ಕಾವ್ಯ ಮುಖ್ಯ ಪಾತ್ರವಹಿಸುತ್ತದೆ. ಹಾಗೆಯೇ ಕಾವ್ಯದ ನಾಯಕನಾದ ಮೊಲ್ಲೆಬೊಮ್ಮಯನ ಪರಿಸರವೂ, ಕವಿಯ ಪರಿಸರವೂ ಎರಡೂ ಒಂದೇ ಆಗಿರುವುದರಿಂದ, ಕವಿಯು ಕಾವ್ಯನಾಯಕನ ಸುತ್ತ ಹೆಣೆಯಲ್ಪಟ್ಟ ಕಥಾ ಹಂದವೂ, ಕವಿಯ ಪರಿಸರದ

ಸುತ್ತ ಹೆಣೆದುದೇ ಆಗಿದೆ. ಹೀಗಾಗಿ ಇಲ್ಲಿ ಕವಿ ಹೇಳುವ ಕಾಲ, ಪ್ರದೇಶ, ವ್ಯಕ್ತಿ, ಸ್ತ್ರೀಯರು, ವೇಷಭೂಷಣ, ಸಮಾಜ, ರಾಜಕೀಯ ಸ್ಥಿತಿಗತಿ, ಧಾರ್ಮಿಕ ಸ್ಥಿತಿ ಎಲ್ಲ ಕವಿಯ ಕಾಲದಲ್ಲಿರುವ ಘಟನೆಗಳೇ ಆಗಿವೆ.

**೩.೨. ಸಮಾಜ ದರ್ಶನ**

ಈ ಕಾವ್ಯ ಓದುಗರಿಗೆ ಬಹು ಹತ್ತಿರವಾಗುತ್ತದೆ. ಏಕೆಂದರೆ ಅಲ್ಲಿ ಕವಿ ಬಿಡಿಸಿರುವ ಜನಜೀವನದ ಚಿತ್ರ. ಕವಿ ಧೂಪದ ರಾಚೇಶನ ಸಾಮಾಜಿಕ ಪ್ರಜ್ಞೆ ಬೆರಗುಗೊಳಿಸುವಂಥದ್ದು. ಸಮಕಾಲೀನ ಬದುಕಿನೊಂದಿಗೆ ಇದ್ದು, ವರ್ತಮಾನದ ಸಂಗತಿಗಳೊಡನೆ ಬೆಸುಗೆ ಹಾಕುವ ಕೆಲಸ ಬಹು ಕಠಿಣವಾದುದು. ಆ ಕೆಲಸವನ್ನು ಕವಿ ಇಲ್ಲಿ ಚೆನ್ನಾಗಿ ಮೇಳೈಸಿದ್ದಾನೆ. ಶರಣನೆಂದರೆ ಸಂಸಾರವನ್ನು ತ್ಯಜಿಸಿದ ಯೋಗಿಯಲ್ಲ, ಸಂಸಾರಿಯಾಗಿಯೇ ಪಾರಮಾರ್ಥಿಕ ಪ್ರಜ್ಞೆ ಸಾಧಿಸುವುದು. ಸಂಸಾರಿಕ ಜೀವನದಿಂದ ನಾನಾ ಬಗೆಯ ಅನುಭವಗಳನ್ನು ಪಡೆದಿದ್ದಾನೆ. ಹಾಗೆಯೇ ಕವಿ ತನ್ನ ಸುತ್ತಮುತ್ತಲಿನ ಪರಿಸರದಿಂದಲೂ ಕವಿಯ ಪ್ರಭಾವಿತನಾಗಿದ್ದಾನೆ. ಕವಿಯ ಲೋಕಾನುಭವ ಅಪಾರವಾದುದಾಗಿದೆ.

'ಧೂಪದ ರಾಚೇಶ' ಬಳಸಿಕೊಂಡ ಘಟನೆಗಳು ಹಳೆಯವು. ತನಗಿಂತಲೂ ಪೂರ್ವದಲ್ಲಿ ಈ ಘಟನೆಗಳ ಬಗ್ಗೆ ಹಲವಾರು ಕಾವ್ಯಗಳು ಉಲ್ಲೇಖಿಸುತ್ತವೆ. ಆದರೆ ಒಂದು ಘಟನೆಯ ನಿಶ್ಚಿತತೆಯನ್ನು ಹೊರತು ಪಡಿಸಿ, ನಮ್ಮ ಪೂರ್ವದ ವೀರಶೈವ ಕಾವ್ಯಗಳೆಲ್ಲವೂ ಬಿಜ್ಜಳನ ಕೊಲೆ ಕೇವಲ ಜಗದೇವನಿಂದ ನಡೆಯಿತೆಂದೂ, ಇನ್ನೂ ಕೆಲವುಕಾವ್ಯಗಳು ಜಗದೇವನ ಜೊತೆಗೆ ಮೊಲ್ಲೆಬೊಮ್ಮಯ್ಯನನ್ನು ಹೆಸರಿಸುತ್ತವೆ.

ಇಂಥ ಎಲ್ಲ ಕಾವ್ಯಗಳ ಗೊಂದಲವನ್ನು ಈ ಕಾವ್ಯ ಪರಿಹರಿಸಲು ಪ್ರಯತ್ನ ಪಟ್ಟಿದೆ. ಬಸವಣ್ಣ, ಅಲ್ಲಮ, ಬಿಜ್ಜಳ, ಹರಳಯ್ಯ, ಮಧುವಯ್ಯ, ಜಗದೇವ, ಮೊಲ್ಲೆಬೊಮ್ಮಯ್ಯ, ಸಿಂಥ ಅರಸ ಕಾಮರಾಜ ಎಲ್ಲರೂ ಸಮಕಾಲೀನರು ಎಂಬುದು ಸ್ಪಷ್ಟವಾಗುತ್ತದೆ. ಕವಿ ಚಿತ್ರಿಸಿದ ಸಾಮಾಜಿಕ ಜೀವನದಲ್ಲಿ ಶ್ರೀಮಂತ, ಬಡವ, ಅರಸ, ಪ್ರಜೆ ಸೂಳೆ, ಕುಲಜ ಹೊಲೆಯ, ಮಂತ್ರವಾದಿ, ಚಮ್ಮಾರ, ಮಂತ್ರಿ, ಕರಣಿಕ ಹೀಗೆ ಎಲ್ಲ ವೃತ್ತಿಯ ಎಲ್ಲ ಜನರನ್ನು ಚಿತ್ರಿಸಿದ್ದಾನೆ.

**I) ಸಾಂಸಾರಿಕ ಚಿತ್ರಣ**

'ಮಕ್ಕಳಿಲ್ಲದ ಬದುಕು ಬರಡು' ಮಕ್ಕಳಿಗಾಗಿ ದೇವರು, ಪೂಜೆ, ಆರಾಧನೆಗಳೆಲ್ಲ. ಕಲ್ಲಮ್ಮಳ ಆರಾಧನೆಯಿಂದಲೇ ಮಗುವಿನ ಫಲ ಅವಳಿಗೆ ದೊರಕುತ್ತದೆ. ಗರ್ಭದಲ್ಲಿನ ಮಗು ಹೊರಬರಲು ತಾಯಿ ಪಡೆದ ವೇದನೆ ಅಷ್ಟಿಷ್ಟಲ್ಲ. ಆದರೆ ಮಗುವಿನ ನಸು ನಗುವಿನ ಮುಖ ಎಲ್ಲವನ್ನು ಮರೆಸುತ್ತವೆ. ಹೆಂಡತಿಯ ಮಾತನ್ನು ಕೇಳದೇ ತಮ್ಮ ಮಾತನ್ನೇ ಅನುಷ್ಠಾನಕ್ಕೆ ತರುವ ಗಂಡಂದಿರಿದ್ದರು. ಗಂಡನ ಮಾತಿಗೆ ಎದುರಾಡದ ಪತ್ನಿಯರಿದ್ದು. (೨-೫೬) ಅಗಲಿದ ಮಗುವಿಗಾಗಿ ಸಿಡಿಲು ತಾಗಿದ ಪ್ರಾಣಿಯಂತೆ ವಿಲವಿಲನೆ ಒದ್ದಾಡುವ ಸ್ತ್ರೀಯರಿದ್ದರು. ಮಗು ದೊರಕಿದಾಗ ಕಳೆದುಹೋದ ಪ್ರಾಣ ಮತ್ತೆ ಬಂದಂತೆ ಕಂದನನ್ನು ಅಪ್ಪಿ ಮುದ್ದಾಡಿ, ದೃಷ್ಟಿಯನ್ನು ತೆಗೆದು ಮಗುವನ್ನು ಮುದ್ದಾಡಿಸುವ ದಂಪತಿಗಳಿದ್ದರು.

ಬುದ್ಧಿವಂತನಾದವ ಶರಣನ ನಡುವಳಿಕೆಯನ್ನು, ನುಡಿಯಲ್ಲಿ ಪಂಚಾಕ್ಷರ ಮಂತ್ರವನ್ನು ಉಚ್ಚರಿಸುವ, ಗುರು, ಲಿಂಗ, ಜಂಗಮಕ್ಕೆ ಒಲಿದವರು ಇದ್ದರು. ಜಾಣನಾದ ಮಗ, ತಂದೆಯ ಸಿರಿಗೆ ಒಲಿಯದೆ,

ಮನದ ಅಜ್ಞಾನ ಕಳೆಯುವ ಜಂಗಮನಿಗೆ ಒಲಿದ ಮಕ್ಕಳಿದ್ದರು, ಬಾಲ್ಯದಿಂದಲೇ ದೈಹಿಕ ಶಕ್ತಿಯ ಜೊತೆಗೆ ಮಾನಸಿಕ ಸ್ಥೈರ್ಯವನ್ನು ತುಂಬುವ ಜಂಗಮರಿದ್ದರು.

ಸಾಮಾಜಿಕ ಪರಿಸರದಲ್ಲಿ ಒಬ್ಬರಿಗೊಬ್ಬರು ಜಗಳಾಡುವುದು ಸಹಜವೇ. ಇಂಥ ಜಗಳ ತಣ್ಣಗಾಗದೆ ಅತಿರೇಕಕ್ಕೆ ಹೋದಾಗ, ಜಗಳವನ್ನು ತಣಿಸಲು ಇಂದಿನ ನ್ಯಾಯಾಂಗದಂತೆ ನ್ಯಾಯದ ಕಟ್ಟೆಗಳಿದ್ದವು. ದೇವರ ವಿರುದ್ಧವಾಗಿಯೇ ಆರೋಪಿಸುವ ಬೊಮ್ಮಗೌಡನಂಥವರು ಇದ್ದರು. ದೇವರು, ಪೂಜೆಯಲ್ಲಿ ನಂಬಿಕೆಯಿದ್ದು, ಕಲ್ಲೇಶನಿಗೆ ಹೂವನ್ನು ಅರ್ಪಿಸುವ ಜನರು ಇದ್ದರು.

ದನ ಕಾಯಲು ಹೊಲಕೆ ಹೋಗುವ, ಅಂಬಲಿಯನ್ನು ಉಣ್ಣುವ, ಗುರುವಿನ ಮಾತನ್ನು ಕೇಳುವ ಮಕ್ಕಳಿದ್ದರು. (೩- ೩೬) ಗುರು ಸೇವೆಯೊಂದನ್ನು ಬಿಟ್ಟು ಬೇರೆನೂ ಬೇಡ ಎಂಬ ಮನಸ್ಥಿತಿ ಇತ್ತು. 'ಪೆಣ್ಣನೊಲ್ಲೆನು ನಿನ್ನ ಶ್ರೀಪಾದ ಸೇವೆಯಂ' ಎನ್ನುವ ಜನರು 'ಎಣ್ಣೆ ಕುಸುಬೆಯಲ್ಲಿದ್ದು' ಕಾಣದಂತೆ, ಇರುವ ಹಾಗೆ ಹೊನ್ನು, ಮಣ್ಣು, ಹೆಣ್ಣನ್ನು, ಹಿಡಿದು ಭಕ್ತನಾಗಿ ಗುರು ಲಿಂಗ, ಜಂಗಮಕ್ಕೆ ಸೇವೆ ಮಾಡುವವರು ಇದ್ದರು. ಮದುವೆ ಜೀವನದ ಪ್ರಮುಖ ಘಟ್ಟ ಎಂದು ನಂಬಿದ್ದರು, ಬಡವ ಶ್ರೀಮಂತ, ಇದ್ದವರು ಇಲ್ಲದವರು ಎಂಬ ಭಿನ್ನತೆ ಗುರುತಿಸಬಹುದು. ಬಂಧುಬಳಗವಿಲ್ಲದ, ಜನನಿ ಜನಕ ಇಲ್ಲದ, ಮನೆ, ಧನ, ಧಾನ್ಯ ಏನೂ ಇಲ್ಲದವರಿಗೆ ಹೆಣ್ಣನ್ನು ಕೊಡದ ಶ್ರೀಮಂತರಿದ್ದರು.

ಸೂಳೆಗೇರಿಯ ಚಿತ್ರಣ ಜರಿದ ದೇಹದ, ಸುಕ್ಕಗಲ್ಲವನ್ನು ಹೊಂದಿ, ಬಿಳಿಯ ಕೂದಲು, ಮಿರಿಗುವ ನಯನಾಂಜನ, ಮೆಲ್ಲಗೆ ಮಾತನಾಡುವ, ಕರೆದು ಮೋಹ ಉಂಟಮಾಡುವ, ಗೃಹಕ್ಕೆ ಬನ್ನಿ ಎಂದು ಕರೆಯುವ ವೃದ್ಧ ಸ್ತ್ರೀಯರ (ಸೂಳೆಯರು) ಇದ್ದರು, ಮದನ ಮುದ್ರೆಯಲಿ ರಾರಾಜಿಸುವ ಸ್ತ್ರೀಯನ್ನು ಕಂಡು ಈ ಭೌತಿಕ ಸುಖವೆಲ್ಲ ಸುಳ್ಳು ಎಂದು ಹೇಳುವ ಬೊಮ್ಮಯ್ಯನಂಥ ಸಾತ್ವಿಕರು ಇದ್ದರು.

ಹೀಗೆ ಸಮಾಜದಲ್ಲಿ ಕ್ಷತ್ರಿಯ, ವೈಶ್ಯರು, ಉನ್ನತ ಕುಲದವರು, ಬ್ರಾಹ್ಮಣರು, ಪರದ, ವಾಣಿಜರ ಮೋಹಕರ, ಪಾಮರರಿದ್ದರು. (೪–೫೫) ಹೀಗೆ ಕಾವ್ಯದಲ್ಲಿ ಸಮಾಜ ಹಾಗೂ ಸಮಾಜದಲ್ಲಿ ಬಹುಮುಖ್ಯ ಪಾತ್ರವಹಿಸುವ ಸಂಸಾರದ ಚಿತ್ರಣವನ್ನು ಇಲ್ಲಿ ನೀಡುತ್ತಾನೆ.

**II) ಮದುವೆ**

ರಾಜವಂಶಜರು ಸಾಮಾನ್ಯ ಶರಣನೊಬ್ಬನಿಗೆ ಹೆಣ್ಣುಕೊಡಲು ಒಪ್ಪುತ್ತಿರಲಿಲ್ಲ. ರಾಜನ ಮಗಳನ್ನು ಕೇಳಿದ ಬಡವರು ಅಪಮಾನ, ಅಪಹಾಸ್ಯಕ್ಕೆ ಒಳಗಾಗುತ್ತಿದ್ದರು. ಸೌಂದರ್ಯ ರಾಣಿಯಂತೆ ಮೆರೆವ, ಸುಂದರ ಕನ್ಯೆಯರು ಇದ್ದರು. ಹುಚ್ಚುಹಿಡಿದಿದೆಯೋ, ಮುಗ್ಧನೋ, ಪರದೇಶಿಯೋ, ಹಿಂದುಮುಂದಿಲ್ಲದವನೋ, ಚೋರನೋ ಹೀಗೆ ಸಾಮಾನ್ಯನೊಬ್ಬನನ್ನು ಅಪಹಾಸ್ಯ ಮಾಡುವ ಸ್ತ್ರೀಯರೂ ಇದ್ದರು. (೫–೧೧) ಸದ್ಭಕ್ತ ಕುಲ ತಿಲಕ, ಮುಕ್ತಿಗೆ ಆಭರಣನಾದ, ಸನ್ಮಾರ್ಗನಿಧಿ, ಶರಣನನ್ನು ನಂಬಿದೆ. ಇವರನ್ನು ಅರಿಯದ ಅಜ್ಞಾನದಲ್ಲಿ ಮರಣವನ್ನು ಬಿಂಬಿಸಿದ ಮೂರ್ಖರು ಇದ್ದರು.

ಹಾಗೆಯೇ ಶರಣರ ಸದ್ಭಕ್ತಿಯ ಅರಿವಾದಾಗ, ತಾವೂ ಅರಸರೆಂಬ ಅಹಂಕಾರವನ್ನು ತೊರೆದು, ಶರಣನಿಗೆ ಕೈಮುಗಿದು, ತಮಗೆ ಬಂದ ಸಂಕಟ ಪರಿಹರಿಸೆಂದು ಬೇಡಿಕೊಂಡ ಸಿಂಧ ಅರಸ ಕಾಮರಾಜನಂಥ

ಅರಸರ ಸಂಖ್ಯೆಯು ಅಧಿಕವಾಗಿತ್ತು. ಬಂದ ಕಷ್ಟವನ್ನು ಪರಿಹರಿಸಿ, ತಮ್ಮ ಪವಾಡವನ್ನು ಮೆರೆದ ಶರಣರ ಸಂಖ್ಯೆಯು ಅಧಿಕವಾಗಿತ್ತು. ಇತಿಹಾಸದ ಪುಟಗಳಲ್ಲಿ ಅರಸರೂ, ಜನಸಾಮಾನ್ಯರೊಂದಿಗೆ ಮದುವೆ ಸಂಬಂಧ ಬೆಳೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ರಾಜವೈಭವದಿಂದಲೆ, ವಿವಾಹ ವೇರ್ಪಡುತ್ತಿತ್ತು. ವಿವಾಹ ಮಂಟಪವನ್ನು ಹೊನ್ನಕಾಂತಿಯಿಂದ, ಥಳಥಳಿಸುವ ಕಳಸ, ಕನ್ನಡಿ, ತೋರಣಗಳಿಂದ ಸುಂದರವಾಗಿ ಸಿಂಗರಿಸುತ್ತಿದ್ದರು. ಕಾಂತೆಯರು ಸತತವಾಗಿ ಮಂಗಳ ವಾದ್ಯದ ಮೂಲಕ ಸಂತಸದಿಂದ ಹಾಡುಗಳನ್ನು ಹಾಡುತ್ತ ಮೆರೆಯುತ್ತಿದ್ದರು. ಮದುವಣಿಗನನ್ನು ಕೂಡಿಕೊಂಡು ದಿಬ್ಬಣ ಸಂಭ್ರಮದಿಂದ ಹೊರಡುತ್ತಿತ್ತು. ನಂತರ ಉಭಯ ದಿಬ್ಬಣಗಳು ಒಂದಾಗಿ ಅಗಣಿತ ವಾದ್ಯಗಳ ನಾದ, ಸ್ತ್ರೀಯರ ಶುಭಹಾಡಿನಿಂದ ನಗರವನ್ನು ಪ್ರವೇಶಿಸುತ್ತಿದ್ದರು. ಮದುವಣಗಿತ್ತಿಯನ್ನು ಸಿಂಗರಿಸಿ, ನವರತ್ನದಾರ್ತಿಯನ್ನು ನೀವಾಳಿಸಿದರು. ಕುಂಕುಮವನಿಟ್ಟು ಮದುವಣಗಿತ್ತಿ ಹರಿನೀಲ ಪುತ್ಥಳಿಯಂತೆ ಕಂಡಳು. ಉನ್ನತ ಉತ್ಸಾಹ ಮತ್ತು ಅತ್ಯಂತ ವೈಭವದಿಂದ ಮದುವೆ ಕಾರ್ಯ ಜರುಗುತ್ತಿದ್ದವು. ಒಂದು ಸಮಾಜದ ಸಾಂಸ್ಕೃತಿಕ ವೈವಿಧ್ಯತೆಯನ್ನು ತಿಳಿಸುವಲ್ಲಿ ಕಾವ್ಯ ಅಪೂರ್ವವಾಗಿ ಚಿತ್ರಣಗೊಂಡಿದೆ.

**III) ಅರಸು–ಅರಸತ್ವ–ಅರಸು ಪರಿವಾರ**

'ಅರಸನಿಲ್ಲದ ಭೂಮಿ, ರಕ್ಷಣೆಯಿಲ್ಲದ ರಾಜನ ಆಳ್ವಿಕೆ, ನಾಂದಿ ಇಲ್ಲದ ನಾಟಕ ನಾರಿ ಇಲ್ಲದ ಬಾಳು, ಅರಸನಿಲ್ಲದ ನಾಡು' ಇವು ಇದ್ದು ಇಲ್ಲದಂತೆಯೇ, ಅರಸ ಬಲಿಷ್ಠನಾಗಿ ಕಾರುಣ್ಯಮೂರ್ತಿಯಂತಿದ್ದು, ಧರ್ಮಸಹಿಷ್ಣುವಾಗಿ ಆಳಿದರೆ ಲೋಕಕ್ಕೆ ಒಳಿತು ಎಂಬ ನಂಬಿಕೆ ಇತ್ತು.

'ಯಥಾರಾಜ ತಥಾಪ್ರಜಾ' ಎಂಬಂತೆ ರಾಜನಾದವ ಹಿಂಸೆಯಲ್ಲಿ ತೊಡಗಿದರೆ ಪ್ರಜೆಗಳು ಹಿಂಸೆಯಲ್ಲಿ ತೊಡಗುತ್ತಾರೆ. ಅರಸನ ಭಂಡಾರದ ಹಣ ಕೊಳ್ಳೆಯಾಗುತ್ತದೆಂದು ಪುರೋಹಿತಶಾಹಿಗಳು ಅರಸನಿಗೆ ದೂರು ಕೊಡುತ್ತಿದ್ದರು. ಧರೆಯನ್ನು ರಕ್ಷಿಸಿ, ದುಷ್ಟರನ್ನು ಕೊಲ್ಲಬೇಕಾದ ದೊರೆಯೇ ತನ್ನ ಸ್ವಹಿತ ರಕ್ಷಣೆಗಾಗಿ ಶರಣರನ್ನು ಶಿಕ್ಷೆಗೆ ಒಳಪಡಿಸಿದ. ರಾಜನಿಂದ ರಕ್ಷಣೆ ಬಯಸಿದ ಶರಣರು ರಾಜನಿಂದಲೇ ಕಷ್ಟಕ್ಕೆ ಒಳಪಟ್ಟಿದುದು ಮಹಾದುರಂತವೇ, ದೂರು ಕೊಟ್ಟವರ ಮಾತನ್ನು ಕೇಳಿ. ಆಲೋಚಿಸಿ, ನಿರ್ಧಾರ ತೆಗೆದುಕೊಳ್ಳಬೇಕಾದುದು ಅರಸನ ಕರ್ತವ್ಯ. ರಾಜ ಪರಿವಾರದವರಿಗೆ ಸಾಮಾನ್ಯರು ಮನ್ನಣೆ ಕೊಡುತ್ತಿದ್ದರು. ಮಂತ್ರಿ, ಕರಣಿಕ, ಸೈನಿಕವರ್ಗ, ದಾಸಿಯರು, ಹೀಗೆ ಅರಸನ ಓಲಗದಲ್ಲಿದ್ದರು.

**IV) ಕಾಯಕ**

ಅಂದಿನ ಸಮಾಜದಲ್ಲಿ ಕಾಯಕ ಬಹು ಪ್ರಾಮುಖ್ಯತೆಯನ್ನು ಪಡೆದಿತ್ತು. ಗೌಡನಾಗಲಿ, ಶ್ರೀಮಂತನಾಗಲಿ, ಬಡವನಾಗಲಿ, ಕಾಯಕದಲ್ಲಿ ತೊಡಗಲೇಬೇಕು. ಕಾಯಕ ದೇವನಿಂದಲೇ ನಿಯಮಿತಗೊಳ್ಳುತ್ತಿತ್ತೆಂಬ ನಂಬಿಕೆ ಇತ್ತು. ಭಕ್ತಿ, ವೀಣೆನುಡಿಸುವ ಕಾಯಕ, ಕರಣಿಕ, ರಾಜ್ಯವನ್ನು ರಕ್ಷಿಸುವ ವೀರ ವೃತ್ತಿಯನ್ನು, ಹೀನ ಕುಲದವರು ಚಪ್ಪಲಿ ಹೊಲೆಯುವ ಕಾಯಕವನ್ನು ಮಾಡುತ್ತಿದ್ದರು. ಒಟ್ಟಾರೆಯಾಗಿ ಪ್ರತಿಯೊಬ್ಬರು ಕಾಯಕದಲ್ಲಿ ನಿಂತರಾಗಿರಲೇಬೇಕು ಎಂಬ ಬಸವಣ್ಣನವರ ಕಾಯಕದ ಕಲ್ಪನೆಯನ್ನು 'ಸಾಕಾರ' ರೂಪಕ್ಕೆ ತರಲಾಗಿದೆ.

## V) ಜೋಯಿಸರು, ಮಂತ್ರವಾದಿಗಳು

'ಜ್ಯೋತಿಶ್ಶಾಸ್ತ್ರ' ಎಂಬುದು ಪ್ರಾಚೀನ ಕಾಲದಿಂದಲೂ ಬಂದ ವಿದ್ಯೆಯಾಗಿದೆ. ಮೊದಲು ಸೂರ್ಯಗ್ರಹಣ, ಚಂದ್ರಗ್ರಹಣ, ಜಾತಕಫಲವನ್ನು ಜ್ಯೋತಿಷ್ಯರಿಂದಲೇ ತಿಳಿಯುತ್ತಿದ್ದರು. ಪಂಪಭಾರತದಲ್ಲಿ ಪಾಂಡವರು ಕಲಿತ ವಿದ್ಯೆಗಳಲ್ಲಿ ಪಂಚಾಂಗ, ಗ್ರಹಗಣಿತಗಳು ಸೇರಿವೆ. ಮಗುವಿನ ನಾಮಕರಣ ಮಾಡಲು, ಜಾತಕ ಕರ್ಮವನ್ನು ತಿಳಿಯಲು ಪಾಂಡಿತ್ಯವುಳ್ಳವರನ್ನು ಕರೆಯುತ್ತಿದ್ದರು. (೨–೫೩)

ಮಿತಿಯಿಲ್ಲದ ಮಂತ್ರ, ಯಂತ್ರ, ತಂತ್ರಗಳನ್ನು ಉಪಯೋಗಿಸುತ್ತಿದ್ದವರು ಇದ್ದರು. ಮಂತ್ರವಾದದಿಂದ ಕೆಟ್ಟಫಲ ಹಾಗೂ ಒಳ್ಳೆಯ ಫಲ ಎರಡೂ ಪರಿಣಮಿಸುತ್ತಿದ್ದವು. ಕೆಟ್ಟಫಲಕ್ಕಾಗಿ ಬಳಕೆಯಾದ ಮಂತ್ರಶಕ್ತಿಯನ್ನು ಇಲ್ಲಿ ಶರಣನೊಬ್ಬ ತನ್ನ ಸಾತ್ವಿಕ ಭಕ್ತಿಯ ಬಲದಿಂದ ನಾಶಗೊಳಿಸುತ್ತಾನೆ. ಪುರದ ಜನರನ್ನು ಕಷ್ಟದಿಂದ ಪಾರುಮಾಡುತ್ತಾನೆ. ಚೌಲದಬಂಟನಂಥ ಮಂತ್ರವಾದಿಗಳು ಅಂದಿನ ಸಮಾಜದಲ್ಲಿ ಇದ್ದರು. ವಿಷಲಹರಿ ಮಂತ್ರ, ಪ್ರಳಯಾಗ್ನಿ ಮಂತ್ರ, ಮಾರಣ ಮಂತ್ರ, ಘುಳು ಘುಳುಮಂತ್ರ, ಹೂಂಕಾರ ಮಂತ್ರ ಹೀಗೆ ಇತ್ಯಾದಿ ಮಂತ್ರ ತಂತ್ರಗಳ ಪಾರಂಗತರು ಅಂದಿನ ಸಮಾಜದಲ್ಲಿ ಇದ್ದುದು ಕಂಡುಬರುತ್ತದೆ.

## VI) ವರ್ಣವ್ಯವಸ್ಥೆ

ಸಮಾಜದ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರು ಉತ್ತಮ ಕುಲದವರಾದರೆ, ಕೀಳುಕುಲದವರಾಗಿ ಚಮ್ಮಾರ ಕಂಡುಬರುತ್ತಾನೆ. ಇಲ್ಲಿ ನಡೆಯುವ 'ವರ್ಣಸಂಕರ ಮದುವೆ'ಗೆ ಪರ ವಿರೋಧ ಪ್ರತಿಕ್ರಿಯೆಗಳೇಳುತ್ತವೆ. ಪುರೋಹಿತಶಾಹಿಗಳ ಮಾತು ಕೇಳಿ ಅರಸೊತ್ತಿಗೆಯ ಜೊತೆಗೆ, ಪ್ರಾಣವನ್ನೆ ಕಳೆದು ಕೊಂಡಿರುವ ಅರಸು ವರ್ಗವು ಕೂಡ ಇತ್ತು. 'ಶರಣರ ಶಿಕ್ಷೆ' ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು ಇಡೀ ವ್ಯವಸ್ಥೆಯನ್ನೇ ತಲ್ಲಣಗೊಳಿಸಿತು.

ಜಡ ಸಂಪ್ರದಾಯವನ್ನೆ ಅಲ್ಲೋಲ ಕಲ್ಲೋಲಗೊಳಿಸಿದ ಕಾಲವದು. ಒಂದು ಉನ್ನತವಾದ ಪರಂಪರೆಯನ್ನು ಹೊಂದಿದ ವರ್ತಮಾನ ತನ್ನ ಬಲವರ್ಧನೆಗಾಗಿಯೇ, ತನ್ನ ವೈಚಾರಿಕ ದೃಷ್ಟಿಯ ಪೀನ ಮಸೂರದ ಮುಖಾಂತರ ಹಿಂದೆ ಹಿಂದೆ ನೋಡಲು ಬಯಸುತ್ತದೆ. ಎಂಬಂತೆ ೧೨ ನೇಯ ಶತಮಾನದ ವೈಚಾರಿಕ ಚಳುವಳಿಯು ಸಂಪ್ರದಾಯ ವ್ಯವಸ್ಥೆಯನ್ನು ಬದಲಾಯಿಸಿತು. ಅಂದು ಧರ್ಮವೆಂಬುದು ಸ್ಥಾವರ. ಸ್ಥಾವರವೆಂಬುದು ಜಂಗಮದ ಕಡೆಗೆ ತಿರುಗುತ್ತಿದ್ದುದು ಕಂಡುಬರುತ್ತದೆ.

## VII) ವಿದ್ಯೆ ವಿದ್ಯಾಭ್ಯಾಸ

ಮೊಲ್ಲೆಬೊಮ್ಮಯ್ಯನು ವೀಣೆ ನುಡಿಸುವ ಜೊತೆಗೆ 'ಸರಿಗಮಪದನಿಸ' ಎಂಬ ಸಪ್ತಸ್ವರಗಳು, ಮೂವತ್ತೆರಡು ರಾಗ, ನಾಲ್ಕು ಮಿಶ್ರಗಳಿಂದ ಶಿವಗೀತವನ್ನು ಹಾಡುತ್ತಿದ್ದನು. ಹಾಗೆಯೇ ಶಿವಾಗಮಶಾಸ್ತ್ರ, ಶಿವಪ್ರಬಂಧ, ಶಿವಭಕ್ತರುಗಳ ಚಾರಿತ್ಯ. ವಚನಗಳನ್ನು ಹಾಡಿ ಕೊಂಡಾಡುತ್ತಿದ್ದ. ಹೀಗಾಗಿ ಆ ಕಾಲದಲ್ಲಿ ಈ ಎಲ್ಲ ಸಂಗೀತ ವಿದ್ಯೆಯನ್ನು ಕಲಿಸುವಂತವರಿದ್ದುದು ವಿದಿತವಾಗುತ್ತದೆ. (೯–೧೫)

ಇದಲ್ಲದೆ ಜನಪದರು ಮದುವೆಯ ಹಾಡುಗಳನ್ನು ಹಾಡುತ್ತಿದ್ದರು. ಮಾಂಗಲ್ಯ ಮಂಟಪದಲ್ಲಿ ಸತತಗಾನವನ್ನು ಮಾಡುವ, ಮಂಗಳ ಕಾರ್ಯಗಳನ್ನು ಹಾಡುತ್ತಿದ್ದರು. ಹೀಗಾಗಿ ಶುಭಸಮಾರಂಭಗಳಲ್ಲೆಲ್ಲ ಸ್ತ್ರೀಯರು ಹಾಡುತ್ತಿದ್ದುದು ಕಂಡುಬರುತ್ತದೆ.

ಹಾಗೆಯೇ ಶರಣನೊಬ್ಬ ಅರಸನನ್ನು ಕೊಲೆಗೈಯುವ ಪ್ರವೃತ್ತಿ ಬರಬೇಕಾದರೆ ಒಂದು ಮಾರ್ಗದರ್ಶನದ ಅಗತ್ಯವಿದೆ. ಈ ಮಾರ್ಗದರ್ಶನವನ್ನು ಗುರು, ಜಂಗಮ ಇಲ್ಲವೆ ಶಿವ ನೀಡುತ್ತಿದ್ದುದಾಗಿ ಕಾವ್ಯದಲ್ಲಿ ಬರುತ್ತದೆ. ವೀರ ವೃತ್ತಿಯನ್ನು ತೊಡುವಲ್ಲಿ ಹಲವಾರು ಮಾರ್ಗದರ್ಶಕರಿದ್ದುದು ಕಂಡುಬರುತ್ತದೆ. ಶರಣಸ್ಥಲದ ಅನುಭಾವದ ಅಭಿವ್ಯಕ್ತಿಯನ್ನು ತಲುಪುವ ಪೂರ್ವದ ಹಂತವಾದ ಗಣಾಚಾರ ವೃಂದಕ್ಕೆ ಸೇರಿದ ಶಿವಭಕ್ತ. ಜೀವನದ ಪ್ರತಿ ಹೆಜ್ಜೆಯಲ್ಲೂ ಬಾಲ್ಯದಲ್ಲಿ–ಕಲ್ಲೂರ ಕಲ್ಲೇಶ್ವರ, ಜಂಗಮ, ಯೌವನದಲ್ಲಿ ಕಲ್ಲೂರ ಕಲ್ಲೇಶ್ವರ ಚಳುವಳಿಯಲ್ಲಿ–ಜಗದೇವನ ತಾಯಿ ಮಾದೇವಿ, ಹೀಗೆ ಜಂಗಮ ಕಲ್ಲೇಶ, ಮಾದೇವಿ ಮಾರ್ಗದರ್ಶಕರಾಗಿದ್ದರು.

**VIII) ವೇಷ ಭೂಷಣ ಅಲಂಕಾರ**

ವೇಷ ಭೂಷಣ ಅಲಂಕಾರ ಎಂದೊಡನೆ ನಮಗೆಲ್ಲ ಥಟ್ಟನೆ ನೆನಪಾಗುವುದು ಸ್ತ್ರೀಯರೇ ಹೌದಲ್ಲವೆ ನಮ್ಮ ಕಾವ್ಯಗಳಲ್ಲೆಲ್ಲ ಬಹುಪಾಲು ಸ್ತ್ರೀಯರ ಸೌಂದರ್ಯಸಿರಿಯನ್ನೆ ವಿವರಿಸುತ್ತಾರೆ. ಶ್ರೀಮಂತರ, ರಾಣಿಯರ, ಮತ್ತು ಸೂಳೆಯರ ಅಲಂಕಾರಗಳ ವಿವರಣೆ ಅಲ್ಲಲ್ಲಿ ಬರುತ್ತವೆ.

ಕರಿಯ ಸೀರೆ, ಕಣ್ಣಿಗೆ ಅಂಜನ, ಪೊನ್ನ ಕಳಸ ಕನ್ನಡಿ, ಸುಗಂಧಲೇಪನ, ಎಣ್ಣೆ ಇತ್ಯಾದಿ ವಸ್ತುಗಳನ್ನು ಬಳಸುತ್ತಿದ್ದರು. ಹೊನ್ನಿನ ಬಳೆ, ಕರಭೂಷಣ, ರತ್ನದ ಆಭರಣಗಳನ್ನು ಧರಿಸುತ್ತಿದ್ದರು. ಹೊನ್ನಿನ ಕಂಕಣ, ನವರತ್ನ ನಿರ್ಮಿತ ಓಲೆಗಳು ಕಿವಿಯಲ್ಲಿ ರಾರಾಜಿಸುತ್ತಿದ್ದವು. ಮುತ್ತಿನ ಮೂಗುತಿ, ರತ್ನ ಹಾಗೂ ಬಂಗಾರದಿಂದ ತಯಾರಿಸಿದ ತೊಡುಗೆಗಳನ್ನು ತೊಡುತ್ತಿದ್ದರು. 'ಮುಡಿಯಿಲ್ಲದ ಶೃಂಗಾರ ವ್ಯರ್ಥ' ಹಾಗಾಗಿಯೇ ಸ್ರೀಯರು ಬಗೆಬಗೆಯ ಮುಡಿ ಶೃಂಗಾರ ಮಾಡಿಕೊಳ್ಳುತ್ತಿದ್ದರು. ಚಂದನ, ಕುಂಕುಮ, ಪಚ್ಚೋಲೆ ಧರಿಸುತ್ತಿದ್ದರು. ರಾಣಿಯರ, ವೇಶಿಯರ ಚಿತ್ರಣ ನೀಡಿದ್ದಾನೆ. ಆದರೆ ಪುರುಷ ವೇಷಭೂಷಣಗಳ ಬಗ್ಗೆ ಹೆಚ್ಚು ಒತ್ತು ಕೊಟ್ಟಿಲ್ಲ.

**IX) ಊಟ**

'ಇಂದಿನದು ನಾಳೆಗಿರಲಿ' ಎಂಬ ಭಾವನೆ ಇವರಲ್ಲಿ ಇರಲಿಲ್ಲ. ಇವರದು 'ದಾಸೋಹ' ಪ್ರವೃತ್ತಿ ಹಾಗಾಗಿಯೇ ಸಂಗ್ರಹದ ಬುದ್ಧಿ ಕಂಡು ಬರುವುದಿಲ್ಲ. ಗಣಾರಾಧನೆಯ ಸಂಧರ್ಭದಲ್ಲಿ ಗುರುಗಳಿಗೆ ಮೊದಲು ಊಟ ಮಾಡಿಸುವ ಪದ್ಧತಿ ಇದೆ.

ಬಳಿಕ ಮೊಮ್ಮಯ್ಯ ದೇವರ ಊಟಮಂ ಮಾಳ್ಪ
ದೊಲಿದು ಸಕ್ಕರೆ ಗುಡಾಜ್ಯಂ ತೈಲ ಕ್ಷೀಂ ಮಧು
ಫಲಧಾನ್ಯ ಲವಣಾಮ್ಲ ಕಟ್ಟು ಮೊದಲಾದಮಂ ತರಿಸಿ ಶಿವಭಕ್ತರ್ಗಳಾ

ಲಲನೆಯರ್ಗಳಿಗೆ ಪಾಕಂ ಕೈಗೊಳಿಸಿ ಶರಣ

ಕುಲ ಜಂಗಮಕ್ಕೆ ಭಸಿತಮನಿತ್ತು ಭವವಂಶ

ತಿಲಕ ಬಿಜಯಂಗೈಸಿ ತಂದು ಪಾದಾರ್ಚನೆಯ ಮಾಡಿ ಮೂರ್ತಂಗೈಸಿದ. (೫-೫೦)

ಶರಣ ಕುಲ ಜಂಗಮಕ್ಕೆ ಯಾವ ರೀತಿ ಊಟವನ್ನು ಮಾಡಿಸುತ್ತಾನೆ ಎಂಬುದರ ಬಗ್ಗೆಯೂ ವಿವರಣೆ ನೀಡುತ್ತಾನೆ. ಹಣೆಗೆ ಭಸಿತವನ್ನು ಕೊಟ್ಟು, ಘಮ ಘಮಿಸುವ ಚಂದನಾಕ್ಷತೆ, ಪುಷ್ಪಪತ್ರೆಗಳಿಂದ, ಧೂಪಾರ್ತಿಯನ್ನು ಮಾಡಿ, ನಂತರದಲ್ಲಿ 'ಷಡುರಸಾನ್ನ ಪಾಕಂಗಳಿಂ ಉಣಬಡಿಸಿ' 'ಸಗುಣಸಲಿಸಿದವಲಿಂಗೆ ಕುಳಿರ್ನಿರ ಕೈಗೆರೆದು' ಎನ್ನುತ್ತಾನೆ. ರಸಾನ್ನವನ್ನು ಉಣಿಸಿದ ನಂತರ ಕೈಗೆ ನೀರನ್ನು ಕೊಡುತ್ತಾನೆ. ಹೀಗೆ ನಮ್ಮ ಭಾರತೀಯ ಪರಂಪರೆಯಲ್ಲಿ ಊಟ ಮಾಡುವ ವಿಧಿವಿಧಾನವನ್ನು ಕವಿ ಇಲ್ಲೂ ಅನುಸರಿಸಿದ್ದಾನೆ.

ಅನ್ನ, ಅಂಬಲಿಯನ್ನು ಸಾಮಾನ್ಯರು ಊಟ ಮಾಡುತ್ತಿದ್ದರು. ಯಥೇಚ್ಛವಾಗಿ ಧಾನ್ಯ, ಬೆಳೆಯುತ್ತಿದ್ದರು. ಒಕ್ಕಲುತನವನ್ನು ಮಾಡುತ್ತಿದ್ದರು. ಷಡರ್‌ಸಾನ್ನ, ದೇವಾನ್ನವೆಂಬುದಾಗಿ ಹೇಳುತ್ತಾರೆ.

**X) ಹೂವುಗಳು**

ಮೊಲ್ಲೆ, ಮರುಗ, ಕೇತಕಿ, ಪಾರಿಜಾತ, ಸುರಹೊನ್ನೆ ಮಧುಕರ , ಅಶೋಕ, ಕಮಲ, ಬಕುಳದ ಹೂವು ಇರುವಂತೆ, ಸೇವಂತಿ ಹೀಗೆ ಹಲವಾರು ಹೂಗಳ ಹೆಸರುಗಳಿವೆ. ಈ ಎಲ್ಲಾ ಹೂವುಗಳನ್ನು ಪೂಜೆಗಾಗಿ ಭಕ್ತಿಯಿಂದ ತಂದು, ಕಲ್ಲೇಶ್ವರನ ಪೂಜೆ ಮಾಡುತ್ತಿದ್ದರು.

**XI) ಸಂಘರ್ಷ ಹಾಗೂ ಆಯುದ್ಧ**

ಬಸವಣ್ಣ-ಬಿಜ್ಜಳರಲ್ಲಿ ಉಂಟಾದ ಮನಸ್ಥಾಪ ಹಾಗೂ ಹರಳಯ್ಯ-ಮಧುವರಸರ ಭಾಂಧವ್ಯ, ಇವರಡೂ ಇಡೀ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಪರಿಸ್ಥಿತಿಯನ್ನೆ ಬದಲಾಯಿಸಿತು. ಸಂಘರ್ಷಕ್ಕೆ ಕಾರಣವಾಯ್ತು. 'ಯಶಸ್ವಿ ಪುರುಷನ ಹಿಂದೆ ಹೆಣ್ಣು ಇದ್ದೇ ಇರುತ್ತಾಳೆ'ಂಬಂತೆ ಜಗದೇವ, ಮೊಲ್ಲೆಬೊಮ್ಮಯ್ಯರು ಪ್ರೇರಿತಗೊಂಡು ಬಿಜ್ಜಳನನ್ನು ಕೊಂದದ್ದು ಮಾದೇವಿಯಿಂದ. ಹೀಗಾಗಿ ಬಿಜ್ಜಳನ ಕೊಲೆ ಧಾರ್ಮಿಕ ಸರ್ಂಘರ್ಷಕ್ಕೆ ಎಡೆಮಾಡಿಕೊಟ್ಟಿತು. ಈ ಕೊಲೆಗಾಗಿ ಜಗದೇವ ಮೊಲ್ಲೆಬೊಮ್ಮಯ್ಯರು ಬಳಸಿದ ಆಯುಧ 'ಖಡ್ಗ' ದೀವಟಿಗೆಯಲ್ಲಿ ಖಡ್ಗವನ್ನಡಗಿಸಿ ಬಿಜ್ಜಳನನ್ನು ಕೊಂದರು.

**XII) ವಾದ್ಯಗಳು**

ವೀಣೆ, ಶಂಖ, ಕಹಳೆ, ಮದ್ದಳೆ, ತಮ್ಮಟೆಗಳ ಶಬ್ದಗಳು ಶುಭ ಸಮಾರಂಭಗಳಲ್ಲೆಲ್ಲ ಮೊಳುಗುತ್ತಿದ್ದವು.

ತಳೆ ಪಲ್ಲವದ ಕೂಡೆ ಢಾಳಿಸುವ ಚವರಪೊಂ

ಗಳಸ ಕನ್ನಡಿ ಶಂಖ ಕಹಳೆ ಘುಡಿ ಘುಡಿಪಮ

ರ್ದಳೆ ಭೇರಿ ಮೊದಲಾದ ನಾನಾ ತೆರದ ವಾದ್ಯ ರವಮುಣ್ಮೆ ಮುಂದೆ ಕೈಯ

ನಲಿದೆತ್ತಿ ಪೊಗಳುತ್ತೈತರ್ಪ ಮಾಗಧರಿಂದ

ಒಲಿದು ಶುಭಪಾಡುಗಳು ಪಾಡು ನಾರಿಯರ್ಗಳಿಂ

ಮಿಳಿತ ನರ್ತನ ಗಾನಗಜರಿಂದಿದಿರ್ಗೊಳಲು ಪೊಳಲು ಪೊರಮಟ್ಟು ಶರಣ (೮-೩೮)

**XIII) ಶಿಕ್ಷೆ**

ಸಮಾಜದಲ್ಲಿ ತೋರುವ ವೈಯಕ್ತಿಕ ವೈಷಮ್ಯಗಳಾಗಲೀ ಧಾರ್ಮಿಕ ಕಲಹಗಳಾಗಲೀ ಅಥವಾ ರಾಜಕೀಯ ಕಲಹವಾಗಲೀ, ಅದನ್ನು ವಿಚಾರಿಸಿ ಪರಿಹರಿಸುವ ಬಹುಮುಖ್ಯ ಕರ್ತವ್ಯ ಅರಸನದು. ಒಮ್ಮೊಮ್ಮೆ ಅರಸ ಎಷ್ಟೇ ಜಾಗರೂಕನಾಗಿದ್ದರೂ, ಪರಿಸ್ಥಿತಿ ಕೈಮೀರಿ ಹೋಗಿರುತ್ತದೆ. ಹಾಗಾಗಿಯೇ ಇಲ್ಲಿ ಬಿಜ್ಜಳ ಧರ್ಮಸಹಿಷ್ಣು, ಜಾತ್ಯಾತೀತ ಭಾವನೆ ಹೊಂದಿದವ. ಆದರೆ 'ಕೊಂಡಿಯ ಮಂಚಣ್ಣ' ಪ್ರತಿಲೋಮ ವಿವಾಹದಿಂದ 'ನಿನ್ನ ರಾಜ ಗುದ್ದುಗೆ ಅಲ್ಲಾಡುತ್ತದೆ' ಎಂದಾಗ ಥಟ್ಟನೆ, ಅರಸ ಬಡವ ಹಾಗೂ ಜಾತಿಹೀನನಾದ ಹರಳಯ್ಯ ಹಾಗೂ ತನ್ನ ಕುಲ ಕೆಡಿಸಿಕೊಂಡ ಮಧುವಯ್ಯನ ಕಣ್ಣು ಕೀಳಿಸುವ, ಎಳಹೂಟೆಯನ್ನು ಎತ್ತಿನ ಕಾಲಿಗೆ ಕಟ್ಟಿ ಎಳೆಸುವ ಹಾಗೂ ಶೂಲಕ್ಕೆ ಹಾಕುವ ಹೀಗೆ ಬಹುಕ್ರೂರವಾದ ಶಿಕ್ಷೆಯನ್ನು ವಿಧಿಸುತ್ತಾನೆ.

ಹಾಗೆಯೇ ಅಂದಿನ ಸಮಾಜದಲ್ಲಿ ತಲೆದೋರುವ ಸಣ್ಣಪುಟ್ಟ ಜಗಳಗಳನ್ನು ಊರ ಹಿರಿಯರು ಪರಿಹರಿಸುತ್ತಿದ್ದರೆಂಬುದಕ್ಕೆ 'ನರೆಂಗಲ್ಲಿನ ನ್ಯಾಯ ಕಟ್ಟೆಯೇ ಸಾಕ್ಷಿಯಾಗಿದೆ. ಹೀಗೆ ಆಗ ಶಿಕ್ಷೆ ಬಹು ಕ್ರೂರವಾಗಿಯೂ,ವ್ಯಕ್ತಿಯ ಪ್ರಾಣವನ್ನು ತೆಗೆಯುವಷ್ಟು ಹೃದಯ ವಿದ್ರಾವಕವಾಗಿದ್ದವೆಂದು ತಿಳಿಯುತ್ತದೆ.

**XIV) ಪ್ರಾಣಿ**

ಕಾವ್ಯದಲ್ಲಿ ಉಲ್ಲೇಖಗೊಂಡಿರುವ ಪ್ರಾಣಿ ವ್ಯವಸಾಯ ಮೂಲದ್ದು. 'ಎತ್ತು' ರೈತನ ದುಡಿಮೆಗೆ ಸಾಕಾರ ನೀಡುವದು. 'ಎತ್ತ'ನ್ನು ಹೇಗೆ ಶರಣರ ಶಿಕ್ಷೆಗೆ ಬಳಸಿದರು ಎಂಬುದನ್ನು ವಿವರಿಸುತ್ತಾರೆ. ನಮ್ಮ ಜನಪದರ ಪ್ರಕಾರ 'ಎತ್ತು' ಬಸವಣ್ಣ ಅವತಾರ. ಬಸವಣ್ಣನು ಹಿಂಸೆಯನ್ನು ಮಾಡುವದಿಲ್ಲ, ಹಾಗೆಯೇ 'ಎತ್ತು' ಕೂಡ 'ಏಳೆಹೂಟೆಯನ್ನು ಎಳೆಯದೇ, ಬಾಂಬಟ್ಟೆಯೊಳಗೆ ನಡೆದವು. ಮತ್ತೆ ಹಳೆಯ ಎತ್ತುಗಳನ್ನು ಎಳಹೊಟೆಗೆ ಕಟ್ಟಿಸಿ ಎಳಸಲು, ಅವು ಆಗಸಕ್ಕೆ ನೆಗೆದವು. ಹೀಗೆ 'ಬಸವಣ್ಣನವರು ಹಾಗೂ 'ಎತ್ತು' ಅಹಿಂಸಾಪರವಾದಿಗಳು. ಅಹಿಂಸೆಯ ಪ್ರತೀಕವಾಗಿ 'ಎತ್ತ'ನ್ನು ಬಳಸಿದ್ದಾರೆ. ವಾನರ ಬೆಕ್ಕು, ಕಸ್ತೂರಿ ಮೃಗ, ಕರಡಿ, ಮುಂಗಲಿ, ಟಗರುಗಳು ಅಂದಿನ ಸಮಾಜದಲ್ಲಿ ಇದ್ದುದರ ಬಗ್ಗೆ ವಿವರಣೆಯನ್ನು ಕವಿ ನೀಡುತ್ತಾನೆ.

ಲಾಲಿಸು ಕಲಿನಾಥಜ ಬಿಜ್ಜಳಭೂ
ಪಾಲನೆರಡುಮರಲೆತ್ತುಗಳಂ ತರಿ
ಸಾಲಸ್ಯದ ಮಾಡದೆ ಶರಣರ ಕರಗಳನು ಬಿಗಿದುಕಟ್ಟಿ
ಮೇಲೆಳೆಹೂಟಯಂ ಬಂಧಿಸಿ ಪೊಡೆಯಲು
ಬಾಲಗಳನ್ನೆಗೆವುತ ನೆಲವೊಂದದೆ
ತಾಳುಗೆಯಂ ಬಾಂಬಟ್ಟೆಯೊಳಗೆ ನಡೆದವುಮಾ ವೃಷಭಗಳು (೧೬-೫೧)

ಹಾಗೆಯೇ ಕಾವ್ಯದಲ್ಲಿ 'ನಾಯಿ'ಯನ್ನು ಉಲ್ಲೇಖಿಸಲಾಗಿದೆ.
'ವೇದಗಳ ವಾದಕೋಸುಗರ ಶ್ವಾನನಿಂದ ಲೋದಿಸನೆ' ಸದ್ಭಕ್ತ 'ಹಾವಿನಾಳ ಕಲ್ಲಯ್ಯ'ಎಂದೂ.

ಮತ್ತೆ ಜಗದೇವ ಕಂಡ 'ಶರಣ ಶಿಕ್ಷೆ'ಯಿಂದ ಜಗದೇವ ಏನು ನಡೆಯಲಿಲ್ಲವೆಂಬಂತೆ ಮನೆಗೆ ಬಂದು ಉಣಲು ಹೋದ ಮಗನಿಗೆ ತಾಯಿ 'ಮೂರುವರೆ ತಿಂಗಳಿಗೆ ಇರಿವೆನೆಂದನ್ನೆರ ಶಿವಶರಣರಾಲಯದ ವರ ಶುನಕ ಮಾತ್ರಮಿರುಮೆನುತಾನು ಚಿಟಿಕಿರಿದು' ಎನ್ನುತ್ತಾಳೆ. ಹಾಗೆಯೇ ಕಾವ್ಯದಲ್ಲಿ ಸರ್ಪ,ಆನೆ, ನಾಯಿಗಳನ್ನು ಉಲ್ಲೇಖಿಸಿದ್ದಾರೆ.

'ಏಳಹೂಟೆಯನ್ನು' ಉಲ್ಲೇಖಿಸಿದ್ದಾರೆ. 'ಎಳಹೂಟೆ'ಯೆಂಬುದು ವ್ಯವಸಾಯದ ಒಂದು ಉಪಕರಣ. ಈ ಸಾಧನವು ಕೃಷಿಕ ಜೀವನವನ್ನು ಬಿಂಬಸುತ್ತದೆ. ಪಶುಗಳು ಅದರಲ್ಲೂ 'ಎತ್ತು' ರೈತನ ಮಿತ್ರ ಪಶುಸಂಗೋಪನೆಯು ಕೂಡ ಅವರ ಬಹುಮುಖ್ಯ ಉದ್ಯೋಗವಾಗಿದ್ದಿತು. ಹೀಗೆ ಕಾವ್ಯದಲ್ಲೆಲ್ಲ ಹಲವಾರು ಪ್ರಾಣಿಗಳನ್ನು ಸಂದರ್ಭಕ್ಕನುಗುಣವಾಗಿ ಉಲ್ಲೇಖಿಸುತ್ತಾರೆ.

**ರಾಜಕೀಯ ಸ್ಥಿತಿಗತಿ**

ಕಲ್ಯಾಣದ ಚಾಲುಕ್ಯರ ಮುಖ್ಯ ಸಾಮಂತ ರಾಜರಲ್ಲಿ ಒಬ್ಬರಾದ ಕಲಚೂರ್ಯ್ಯರು ಕರ್ನಾಟಕದ ಇತಿಹಾಸದಲ್ಲಿ ಬೆಳಕಿಗೆ ಬಂದದ್ದು ೧೨ನೇಯ ಶತಮಾನದ ಮಧ್ಯಭಾಗದಲ್ಲಿ[೧] **(Annual Repoort of South Indian Apigraphi.** 1925-26 ಆರ್ಕಿಯಾಲಾಜಿಕಲ್ ಸರ್ವೆಆಫ್ ಇಂಡಿಯಾ ನವದೆಹಲಿ) ಅವರ ಸ್ವತಂತ್ರ ಆಡಳಿತ ಅಲ್ಪಾವಧಿಯದು, ಕೇವಲ ೨೨ ವರ್ಷ ಆದರೆ ಈ ಅಲ್ಪವಧಿಯಲ್ಲಿ ಕೂಡ ಕರ್ನಾಟಕವು ರಾಜಕೀಯ, ಸಮಾಜ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳಾದವು.

ಕರ್ನಾಟಕದಲ್ಲಿ ಕಲಚುರಿಗಳ ಇತಿಹಾಸವು ಪ್ರಾರಂಭವಾಗುವದು ಉಚ್ಚತನಿಂದ (ಸು. ೯೭೫) ಅಸಗ (ಕ್ರಿ.ಶ.೯೫೦), ಕನ್ನಮ (ಕ್ರಿ.ಶ೯೭೫)ಕಿರಿಯಸಗ (ಕ್ರಿ.ಶ.೧೦೦೦) ಮತ್ತು ರಾಜ (೧೦೨೫) ಆಳಿದರು ಈ ಅರಸರ ಪಾತ್ರವು ಇತಿಹಾಸದಲ್ಲಿ ಗೌಣವಾಗಿದೆ. ವಂಶದ ರಾಜಕೀಯ ಚಟುವಟಿಕೆಗಳು ಪ್ರಾರಂಭವಾಗುವದು ಬಿಜ್ಜ ಅಥವಾ ಬಿಜ್ಜಳನಿಂದ (೧೯೬೭) ಮಹಾಮಂಡಲೇಶ್ವರನಾದ ಈತ ಮಂಗಲವೇಡಿ ಪ್ರಾಂತವನ್ನು ಆಳುತ್ತಿದ್ದನು ಈತನ ಆಳ್ವಿಕೆಯಲ್ಲಿ ಮಂತ್ರಿಯಾಗಿದ್ದ ಬಸವಣ್ಣನವರ ವಿಚಾರಕ್ರಾಂತಿ, ಅವರ ಆದರ್ಶಗಳು ಮೂಲತಃ ಧಾರ್ಮಿಕ, ಸಾಮಾಜಿಕ, ರಾಜಕೀಯ ವಲಯದಲ್ಲಿ ಕ್ರಾಂತಿಯ ಅಲೆಯನ್ನೆಬ್ಬಿಸಿತು. ಸಮಾಜದಲ್ಲಿ ನಡೆದ 'ಪ್ರತಿಲೋಮ ವಿವಾಹ'ದಿಂದಾಗಿ ವೈಭವದಿಂದ ಆಳಿದ ಕಲ್ಯಾಣದ ಕಲಚೂರ್ಯ ಮನೆತನದಲ್ಲಿ ವೈಮನಸ್ಸುಗಳು ತಲೆದೋರಿದವು, ಬಿಜ್ಜಳನ ಮನದಲ್ಲಿ ಶರಣರವಿರುದ್ಧ ವಿಷಬೀಜ ಬಿತ್ತುವ ಕಾರ್ಯ ನಡೆಯಿತು ಇದರಿಂದ ಶರಣರ ಶಿಕ್ಷೆ, ಬಸವೇಶ ಕಲ್ಯಾಣವನ್ನು ಬಿಟ್ಟು ಸಂಗಮೇಶನೆಡೆಗೆ ಸಾಗಿದ್ದು, ಕೊನೆಗೆ ಬಿಜ್ಜಳನ ಕೊಲೆಯಲ್ಲಿ ಕ್ರಾಂತಿ ಕೊನೆಗೊಂಡಿತು. ಶರಣರ ರಕ್ತ ನೆಲಕ್ಕೆ ಬೀಳಲು ಬಿಜ್ಜಳ ತನ್ನ ರಾಜಗದ್ದುಗೆಯನ್ನು ಕಳೆದುಕೊಂಡ, ಹಾಗೇಯೇ ತನ್ನ ಪ್ರಾಣವನ್ನೆ ಕಳೆದುಕೊಂಡನು. ಬಿಜ್ಜಳನ ಆಳ್ವಿಕೆ ಅಂತ್ಯವನ್ನು ಕಂಡಿತು ಬಿಜ್ಜಳನ ಮಗ ಸೋವಿದೇವನ ಆಳ್ವಿಕೆಯ ವಿರುದ್ಧ ಅಂತಃ ಕಲಹಗಳು ಒಳಸಂಚುಗಳು ಬಂಡಾಯಗಳೇ ನಡೆದವು ರಾಜ್ಯದಲ್ಲಿ ಅನೇಕ ದಂಗೆಗಳಾದವು ಅಂತಃಕಲಹಗಳಿಂದಾಗಿ ಸಾಮ್ರಾಜ್ಯವೇ ಚೂರು ಚೂರಾಗಿ ಹರಿಯಿತು ಹೀಗೆ ೧೧೭೬ ವೇಳೆಗೆ ಸೋವಿದೇವನ ಆಳ್ವಿಕಯು ಕೊನೆಗೊಂಡಿತು[೨]. ಹೀಗೆ ಇಡೀ ರಾಜಕೀಯ ಚಿತ್ರಣದಲ್ಲಾದ ಬದಲಾವಣೆಯನ್ನು ಕಾವ್ಯವು ನಮ್ಮ ಕಣ್ಣುಂದೆ ನಿಲ್ಲಿಸುತ್ತದೆ.

## ಧಾರ್ಮಿಕ ಸ್ಥಿತಿಗತಿ

ಹನ್ನೆರಡನೇಯ ಶತಮಾನದಲ್ಲಿ ಜರುಗಿದದು ಬಹುಮುಖಿಯಾದ ಚಳುವಳಿ ಅದರಲ್ಲಿ ಒಂದು ಮುಖ ಧಾರ್ಮಿಕ ಸ್ಥಿತಿ. ೧೨ನೇ ಶತಮಾನ ಅನೇಕ ಕಾರಣಗಳಿಂದಾಗಿ ಕುತೂಹಲಕಾರಿಯಾಗಿದೆ ಕಂದಾಚಾರಗಳು, ತಲೆದೋರಿದ್ದವು. ಸಮಾಜ ಮೂಢನಂಬಿಕೆಗಳ ಗೂಡಾಗಿದ್ದಿತು. ಶರಣರು ಸಾಂಪ್ರಾದಾಯಿಕ ನ್ಯೂನ್ಯತೆಗಳನ್ನು ಸರಿಪಡಿಸಿ ಒಂದು ನವ ಸಾಮಾಜದ ನಿರ್ಮಾಣ ಮಾಡ ಬಯಸಿದರು ಸತ್ವಹೀನ ಸಮಾಜದ ಧಾರುಣ ಭೇಧನೀತಿ, ಜನತೆಯ ಮೌಢ್ಯತೆಯಿಂದ ತುಂಬಿದ ಅಂಧಶ್ರದ್ಧೆಗಳು, ಡಾಂಭಾಚಾರದ ಜಿಡ್ಡು, ತಾ ಮೇಲೆಂಬ ಅಹಂಕಾರ ಇವೆಲ್ಲವನ್ನು ತೊಡೆಯುವದರ ಜೊತೆಗೆ ಜಡ ಸಂಪ್ರಾದಾಯದ ವ್ಯವಸ್ಥೆಯನ್ನೆ ಅಲುಗಾಡಿಸಿತು. ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಉನ್ನತ ಸ್ಥಾನದ ಮಧುವರಸ ಕೀಳುಕುಲದ ಹರಳಯ್ಯ ಇವರೂ 'ವೀರಶೈವ ದೀಕ್ಷೆಯನ್ನು' ಪಡೆದು 'ಸ್ವಕುಲದ'ವರಾದರು. ಬದಲಾವಣೆ ಎಂಬುದನ್ನು ಅದರಲ್ಲೂ ಧಾರ್ಮಿಕ ಬದಲಾವಣೆ ಎಂದರೆ ದೊಡ್ಡ ಕೋಲಾಹಲವೇ ಏಳುತ್ತದೆ ಇಲ್ಲಿಯೂ ನಡೆದದ್ದು ಅದೇ. ಇಡೀ ಧಾರ್ಮಿಕ ವ್ಯವಸ್ಥೆಯು ಚಿತ್ರಣವನ್ನು ಬದಲಾವಣೆಗೊಳಿಸಲಾಯ್ತು ಧರ್ಮಕ್ಕೆ ಸವಾಲು ಹಾಕಿದ ಬ್ರಾಹ್ಮಣ, ಶೂದ್ರರ ನಡುವಿನ ವಿವಾಹದಿಂದಾಗಿ ಧಾರ್ಮಿಕ ಸಂಘರ್ಷವೇ ನಡೆಯಿತೆನ್ನಬಹುದು.

ಹೀಗೆ ಅಂದು 'ಧರ್ಮ' ಎಂಬುದು ಒಂದು ಕಟ್ಟಳೆಗೆ ಒಳಪಟ್ಟಿತು. ವರ್ಣವ್ಯವಸ್ಥೆಯಲ್ಲಿ ಮೇಲು, ಕೀಳೆಂಬ ಅಂತರಗಳಿದ್ದವು. ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾದದ್ದು ಏನೆಂದರೆ, ವರ್ಣವ್ಯವಸ್ಥೆಯ ಈ ಅಂತರವನ್ನು ಒಂದು ಮಾಡುವ ಕಾರ್ಯ ನಡೆಯಿತು ಅದೇ ಮುಖ್ಯವಾದುದು. ಈ ಕಾವ್ಯದಲ್ಲಿ ಇಂಥ ಧಾರ್ಮಿಕ ಬದಲಾವಣೆಯನ್ನು ಸೂಕ್ಷ್ಮವಾಗಿ ಬಿಂಬಿಸಿದ್ದಾರೆ.

'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ಎಂದು ಸಾರಿದ ಶರಣರು ಸ್ಥಾವರವನ್ನು ಕಡೆಗಣಿಸಿ ಜಂಗಮದೆಡೆಗೆ ಸಾಗಿದರು. ಶರಣರು ಇದ್ದ ಧರ್ಮ ವ್ಯವಸ್ಥೆಯನ್ನು ವಿನಾಶಮಾಡಿ, ಸಮಾನತೆಯ ತಳಹದಿಯ ಮೇಲೆ ಹೊಸ ಧರ್ಮವನ್ನು ಹುಟ್ಟು ಹಾಕಿದರು. ಅಂಬೇಡ್ಕರರು 'ಯಾವ ಧರ್ಮ ಮನುಷ್ಯ ಮನುಷ್ಯರ ಮಧ್ಯೆ ಸಮಾನ ಗೌರವ ತಾಳೂವುದನ್ನು ಪಾಪ ಎನ್ನುತ್ತದೆಯೋ, ಅದು ಧರ್ಮವೇ ಅಲ್ಲ' ಎನ್ನುತ್ತಾರೆ. ಹಾಗೆಯೇ ಶರಣರ ವಿಚಾರಗಳು ಇದ್ದುದು ಕಂಡುಬರುತ್ತದೆ. ಮರಾಣೀತಿಹಾಸಗಳು ಕೈಲಾಸ, ಶಿವ, ಪುಷ್ಪಕ ವಿಮಾನ ಇತ್ಯಾದಿ ಕಲ್ಪನಾ ವಿಲಾಸದ ಸುತ್ತ ಕಾವ್ಯ ಹೆಣೆದು ಒಂದು ಕಲ್ಪನಾ ಪ್ರಪಂಚವನ್ನೆ ಸೃಷ್ಟಿಸಿದ್ದವು. ಆದರೆ ೧೨ನೇಯ ಶತಮಾನದ ಶರಣರು ಕೈಲಾಸವನ್ನು ತಮ್ಮ ಕಾಯಕದಲ್ಲಿ ತಂದು ಭೂಮಿಯನ್ನೆ ಸ್ವರ್ಗವಾಗಿರಿಸಿದರು. ಧರ್ಮವು ಇಲ್ಲಿ 'ಸ್ಥಾವರದಿಂದ ಜಂಗಮದ ಕಡೆಗೆ' 'ಶೈವದಿಂದ ವೀರಶೈವದ' ಕಡೆಗೆ ತಿರುಗಿದುದರ ಸೂಕ್ಷ್ಮ ಚಿತ್ರಣವನ್ನು ನಾವಿಲ್ಲಿ ಕಾಣಬಹುದು.

ಹೀಗೆ ಈ ಕಾವ್ಯ ಅನೇಕ ಐತಿಹಾಸಿಕ ಸಂಗತಿಗಳನ್ನು ಅನಾವರಣಗೊಳಿಸುವುದರ ಜೊತೆಗೆ ಆ ಪರಿಸರದ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುತ್ತದೆ. ಹೀಗಾಗಿಯೇ ಕವಿ ತನ್ನ ಕಾಲಘಟ್ಟದ ಜೊತೆಗೆ ನಡುಗನ್ನಡ ಕಾಲಘಟ್ಟವನ್ನು ಸಮಕಾಲೀನಗೊಳಿಸುವಲ್ಲಿ ಯಶಸ್ವಿಯಾಗಿದ್ದಾನೆ.

## ೩.೩. ಎಳಹೂಟೆ ಪ್ರಸಂಗ

ನಡುಗನ್ನಡದ ಶರಣ ಚಳುವಳಿಯ ಬಹುಮುಖ್ಯ ಆಶಯ ಸಾಮಾಜಿಕ ಪರಿವರ್ತನೆ. ಸಾಮಾಜಿಕ ಪರಿವರ್ತನೆ ಎಂಬುದು ಥಟ್ಟನೆ ಒಮ್ಮಿಂದೊಮ್ಮೆಲೆ ಘಟಿಸುವ ಕ್ರಿಯೆಯಲ್ಲ; ಅದಕ್ಕೆ, ಹಿಂದೆ ತನ್ನದೇ ಆದ ಹಲವಾರು ಮನಸ್ಥಿತಿಗಳು, ಸಂದರ್ಭಗಳು ಕಾರಣೀಭೂತವಾಗಿ ಕೆಲಸ ಮಾಡುತ್ತಿರುತ್ತವೆ. ಆ ಕಾರಣಕ್ಕಾಗಿಯೇ 'ಪರಿವರ್ತನೆ' ಎಂಬುದು ಯಾವಾಗಲೂ ಚಳುವಳಿಗಳು ಮುಖೇನವಾಗಿಯೇ ಪ್ರಾರಂಭವಾಗುತ್ತವೆ. ಅದನ್ನೆ ಲೇಖಕರೊಬ್ಬರು `Movement is Precipted Results of accmulated Wrongs' ಅಂದರೆ ಚಳುವಳಿ ಎಂಬುದು ಶೇಖರಗೊಳ್ಳತ್ತಾ, ಹೋದ ಹಲವಾರು ಅನ್ಯಾಯಗಳ, ಪರ್ಯಾಪ್ತ ಸ್ಥಿತಿಯ ಪರಿಣಾಮವಾಗಿದೆ. ಬಹುಕಾಲದಿಂದಲೂ ಜನಸಾಮಾನ್ಯರ ಮೇಲಾದ ದಬ್ಬಾಳಿಕೆಯ, ಶೋಷಣೆಯ, ಅನ್ಯಾಯಗಳ ಅನಿವಾರ್ಯ ಪ್ರತಿಕ್ರಿಯೆಯಾಗಿ ಹಲವಾರು ಘಟನೆಗಳು ಜರುಗುತ್ತವೆ. ಇಂಥ ಘಟನೆಗಳು ಬಹುತೇಕ ಸಂದರ್ಭದಲ್ಲಿ, ದಬ್ಬಾಳಿಕೆಯ ವಿರುದ್ಧ ಬಂಡೇಳುವ ಸಂದರ್ಭಗಳನ್ನು ಹುಟ್ಟು ಹಾಕುತ್ತವೆ. ಶರಣ ಸಂಸ್ಕೃತಿಯ ಕಾಲದಲ್ಲಿ ಪ್ರಭುತ್ವವನ್ನು ಅಲ್ಲಾಡಿಸುವಂಥ ಘಟನೆಯನ್ನು ಎಳಹೂಟೆ ಪ್ರಸಂಗದಲ್ಲೂ ಕಾಣುತ್ತೇವೆ.

ಎಳಹೂಟೆಯೆಂಬುದು ವ್ಯವಸಾಯದ ಒಂದು ಉಪಕರಣ ಇದಕ್ಕೆ ಹಲಬೆ, ಹಲಕೆ ಎಂದೂ ಕರೆಯುತ್ತಾರೆ. ಈ ಎಳಹೂಟೆ ಅಥವಾ ಹಲಬೆಗೆ ಬಿಜ್ಜಳನು 'ಹರಳಯ್ಯ ಮತ್ತು ಮಧುವರಸ'ರನ್ನು ಕಟ್ಟಿಸಿ, ಎಳಸುವ ಶಿಕ್ಷೆಯನ್ನು ನೀಡುತ್ತಾನೆ. ಎಳಹೂಟೆ ರೂಪದ ಶಿಕ್ಷಾವಿಧಾನವು ಅಪರಾಧಿಗಳಿಗೆ ಕೊಡಮಾಡುವ ಅಮಾನವೀಯ ಶಿಕ್ಷೆಯಾಗಿದೆ. ಅಪರಾಧ ಹೇಯಕೃತ್ಯವಾಗಿದ್ದಾಗ ಸಮಾಜ ಎಂಥ ಘೋರ ಶಿಕ್ಷೆಯನ್ನು ಸಹಜವೆಂಬಂತೆ ಪರಿಗಣಿಸುತ್ತದೆ. ಆದರೆ ಇಲ್ಲಿ ಬಿಜ್ಜಳನು, ಮಧುವರಸ ಮತ್ತು ಹರಳಯ್ಯರು 'ಬ್ರಾಹ್ಮಣ-ಶೂದ್ರ' ಸಂಸ್ಕೃತಿಗಳನ್ನು ಮಿಳಿತಗೊಳಿಸಲು ಪ್ರಯತ್ನಿಸಿದರೆಂಬ ಕಾರಣಕ್ಕೆ ಅವರನ್ನು ಶಿಕ್ಷಿಸುತ್ತಾನೆ.

ಬಿಜ್ಜಳನ ಶಿಕ್ಷೆಯೇ ಸಮಾಜದ ಕಣ್ಣಲ್ಲಿ ಪ್ರಧಾನವಾಗಿ ಕಾಣತೊಡಗಿತು. ಕಾರಣ ಆ ಕಾಲಕ್ಕಾಗಲೇ ಬಸವಣ್ಣನವರ 'ಹೊಸಧರ್ಮಕ್ಕೆ' ಮಾರು ಹೋದ ಜನ, ಆ ಧರ್ಮದಲ್ಲಿನ ಹೊಸ ಆಚಾರ-ವಿಚಾರಗಳಿಗೆ ಸ್ಪಂದಿಸುವ ಶಕ್ತಿವಂತಿಕೆಯನ್ನು ಪಡೆದುಕೊಳ್ಳತೊಡಗಿತ್ತು. ಅಂತೆಯೇ ಅಂದಿನ ಸಮಾಜಕ್ಕೆ ಅಂತರ್ಜಾತಿಯ ವಿವಾಹವಾಗಲೀ, ಪ್ರತಿಲೋಮವಿವಾಹವಾಗಲೀ, ಅಪರಾಧವೆನಿಸಲಿಲ್ಲ. ಬದಲಾಗಿ ಇಷ್ಟು ಮಾತ್ರದ ತಪ್ಪಿಗೆ 'ಎಳಹೂಟೆಯಂಥ' 'ದೇಹಾಂತಶಿಕ್ಷೆ' ಅತಿಯಾದದ್ದೆನ್ನಿಸುವಷ್ಟು ಪಕ್ವಗೊಳ್ಳತೊಡಗಿತ್ತು. ಅಂತೆಯೇ ಇದು ಕ್ರಮೇಣ ಪ್ರಭುತ್ವ ಹಾಗೂ ಜನ ಸಾಮಾನ್ಯರ ನಡುವಿನ ಸಂಘರ್ಷದ ಸ್ವರೂಪವನ್ನು ಪಡೆದುಕೊಳ್ಳತೊಡಗಿತು. ಇದೇ ಸಂಘರ್ಷವು ಮುಂದೊಂದು ದಿನ ಧಾರ್ಮಿಕ ಮತ್ತು ರಾಜಕೀಯ ಪರಿಸ್ಥಿತಿಗಳಲ್ಲಿ ಉಚ್ಚಾಯ ಸ್ಥಿತಿಯನ್ನು ತಲುಪಿ, ಮೊಲ್ಲೆಬೊಮ್ಮಯ್ಯನಿಂದ ಬಿಜ್ಜಳನ ವಧೆ ಮಾಡಿಸುವ ಮಟ್ಟಕ್ಕೂ ಕೊಂಡೊಯ್ಯಿತೆನ್ನಬಹುದು.

ಎಳೆಹೂಟೆ ಪ್ರಸಂಗದಿಂದಾಗಿ ಪ್ರಮುಖವಾಗಿ ಮೂರು ತೆರನಾದ ಪರಿವರ್ತನೆಗಳಾದುದನ್ನು ಗುರುತಿಸಬಹುದಾಗಿದೆ. ಸಾಮಾಜಿಕ ಪರಿವರ್ತನೆ, ಧಾರ್ಮಿಕ ಪರಿವರ್ತನೆ ಹಾಗೂ ರಾಜಕೀಯ

ಪರಿವರ್ತನೆ.ಈ ಮೂರು ತೆರನಾದ ಪರಿವರ್ತನೆಗಳಲ್ಲಿ ಪ್ರಸಂಗವೊಂದು ಹೇಗೆ ತನ್ಮೂಲಕ ಇಡೀಯಾದ ಪರಿವರ್ತನೆಗೆ ಕಾರಕಾಂಶವಾಗುತ್ತದೆಂಬುದನ್ನು ನೋಡಬಹುದಾಗಿದೆ.

**ಸಾಮಾಜಿಕ ಪರಿವರ್ತನೆ**

ಸಮಾಜದ ವರ್ಣವ್ಯವಸ್ಥೆಯನ್ನೆ ಬುಡುಮೇಲುಗೊಳಿಸಿದ 'ಬ್ರಾಹ್ಮಣ-ಶೂದ್ರ' ವಿವಾಹವೊಂದು, ಇಡೀ ಸಾಮಾಜಿಕ ವ್ಯವಸ್ಥೆಯನ್ನೆ ಪರಿವರ್ತನೆಗೊಳಿಸಿತು. ಬಹುಕಾಲ ಕತ್ತಲಲ್ಲಿರುವವರಿಗೆ ದೀಪದ ಬೆಳಕು ಕಣ್ಣನ್ನು ಕೋರೈಸುವಂತೆ, ರೂಢಿಗತವಾದ, ಮೌಢ್ಯಯುಕ್ತ ಕಂದಾಚಾರಗಳಿಗೆ, ಒಗ್ಗಿಕೊಂಡ ಜನಸಾಮಾನ್ಯರು ಅಂತರಜಾತಿ ವಿವಾಹದಿಂದಾಗುವ 'ಪ್ರತಿಲೋಮ ವಿವಾಹ'ವನ್ನು ಒಪ್ಪದಾದರು. ಇಲ್ಲಿ 'ಬ್ರಾಹ್ಮಣ' ಸಂಸ್ಕೃತಿಗೆ 'ಕೊಡಲಿ ಏಟು' ಬೀಳುವ ಕೃತ್ಯವು ನಡೆದದ್ದು, ಮೇಲ್ಜಾತಿಯವರನ್ನು ಎಚ್ಚರಿಸಿತು. ಹೀಗಾಗಿಯೇ ಮೇಲ್‌ಸ್ತರದವರು 'ಪ್ರತಿಲೋಮ ವಿವಾಹ'ವನ್ನು ವಿರೋಧಿಸಿದರಲ್ಲದೇ, ಶರಣರ ವಿರುದ್ಧ ದೂರಗಳ ಪಟ್ಟಿಯನ್ನೆ ರಾಜನಿಗೆ ಒಪ್ಪಿಸತೊಡಗಿದರು.

ಬಸವಣ್ಣನವರ ಸ್ವಾತಂತ್ರ, ಸಮಾನತೆಯ ತತ್ವಗಳು, ಶರಣ ಧರ್ಮವನ್ನೊಪ್ಪಿದ ಶರಣರೆಲ್ಲರೂ ಒಂದೇ ಎಂಬ ಸಮಾನತೆಯ ಮಾತನ್ನು ಒಪ್ಪಿದ ಶರಣಸಮೂಹ ಅಪಾರವಾಗಿದ್ದಿತು. ಈ ಶರಣ ಸಮೂಹ ಸಹಜವಾಗಿಯೇ 'ಪ್ರತಿಲೋಮ' ವಿವಾಹಕ್ಕೆ ಪ್ರೇರಣೆಯನ್ನು ಒದಿಗಿಸಿದವು. ಹೀಗೆ ಶರಣ ಹಾಗೂ ಶರಣೇತರರ ನಡುವೆ ಬಿರುಕು ಮೂಡಿತು. ಹಾಗೆಯೇ ಪ್ರಭುತ್ವದ ವಿರುದ್ಧವು ಸಿಡಿದೇಳುವಂತೆ ಮಾಡಿತು. ಸಾಮಾಜಿಕ ವ್ಯವಸ್ಥೆಯಲ್ಲಿ ಜಡ ಸಂಪ್ರದಾಯಗಳು ಸವೆಯತೊಡಗಿದವು. ಕಂದಾಚಾರಗಳಿಗೆಲ್ಲ ಸಂಚಕಾರ ಬಂದಿತು. ಹೀಗಾಗಿ ಸಂಪ್ರದಾಯವಾದಿಗಳ ಹಾಗೂ ವಿಚಾರವಾದಿಗಳ ನಡುವೆ ವೈಷಮ್ಯ ತಲೆದೋರಿತು. ಯಾವಾಗ ಸಮಾಜದ ಸಿದ್ಧ ವ್ಯವಸ್ಥೆಗಳನ್ನು ಮೀರಿ, ಕೃತ್ಯಗಳು ನಡೆಯುತ್ತವೆಯೋ ಆಗೆಲ್ಲ ವಿರೋಧಗಳು ಬರುವದು ಸಹಜವೇ. ಹಾಗೆಂದು ಹೊಸ ವಿಚಾರಕ್ಕೆ, ಆಚಾರಕ್ಕೆ, ಕೈ ಹಾಕದೆ ಇರುವುದು ಸಾಧ್ಯವಿಲ್ಲ. ಹಾಗೆಯೇ ಸಮಾಜದಲ್ಲಿ ಸಾಮಾಜಿಕ ವ್ಯವಸ್ಥೆಗೆ ಹೊಸ ತಿರುವನ್ನು ಒದಗಿಸುವ ಕಾರ್ಯವನ್ನು ಈ 'ಪ್ರತಿಲೋಮ ವಿವಾಹ' ಹಾಗೂ 'ಎಳಹೂಟೆ ಪ್ರಸಂಗಗಳು' ಮಾಡಿದವು ಎನ್ನಬಹುದು. ಸ್ವರ್ಗ-ನರಕ, ಪಾತಾಳ ಲೋಕಗಳನ್ನು ಒಂದಾಗಿಸಿದ 'ಬ್ರಾಹ್ಮಣ ದ್ರೋಹಿ'ಗಳು ಇವರು. ಎಂದು ಇವರ ಘೋರ ಪಾಪಕ್ಕೆ 'ಎಳಹೂಟೆ'ಯಂಥ ಶಿಕ್ಷೆಯೇ ಸೂಕ್ತವಾದದು ಎಂದು ನಿರ್ಧರಿಸುವವರು ಬ್ರಾಹ್ಮಣರೇ. ಇಡೀ ಸಮಾಜದ ಬೀದಿ ಬೀದಿಗಳಲ್ಲಿ ಅಮಾನುಷವಾಗಿ ಎಳಸಿದ ರೀತಿಯಂದಾಗಿ ಸಮಾಜದಲ್ಲಿ ದೊಡ್ಡ ಗಲಭೆಯೇ ನಡೆಯಿತು.

**ಧಾರ್ಮಿಕ ಪರಿವರ್ತನೆ**

ನಡುಗನ್ನಡದಲ್ಲಾದ ಬಹುದೊಡ್ಡ ಪರಿವರ್ತನೆಗಳಲ್ಲಿ ಧಾರ್ಮಿಕ ಪರಿವರ್ತನೆ ಮುಖ್ಯವಾದುದು. ಯಾವುದೇ ಧರ್ಮವಿರಲೀ, ಅದು ಜಡ ಸಂಪ್ರದಾಯಕ್ಕೆ ಒಳಗಾಗಿ, ಜನಸಾಮಾನ್ಯರ ಮೇಲೆ ಅತೀಯಾದ ಕಟ್ಟಳೆಗಳನ್ನು ಹೇರಿದಾಗ, ಆ ಕಟ್ಟಳೆಗಳನ್ನು ಮುರಿದು ಹೊಸ ಧರ್ಮದ ಸ್ಥಾಪನೆಯತ್ತ ಜನಸಾಮಾನ್ಯರ ಮನ ವಾಲುವದು ಸಹಜವೇ ಆಗಿದೆ. ಬ್ರಾಹ್ಮಣ ಧರ್ಮದ ಮಡಿ, ಮೈಲಿಗೆ, ಆಚಾರ, ವಿಚಾರಗಳು,

ಶೀಲಪ್ರಜ್ಞೆ, ಯಜ್ಞಯಾಗಾದಿಗಳು ಹೀಗೆ ಹಲವಾರು ಕಟ್ಟಳೆಗಳ ಸರಮಾಲೆಯಿಂದಾಗಿ ಧರ್ಮ ಕೇವಲ ಕೆಲವೇ ಜನರ ಸ್ವತ್ತಾಗುತ್ತದೆ. ಅತೀಯಾದ ಇಂಥ ಆಚರಣೆಗಳ ವಿರುದ್ಧ ನಡೆದ ಧಾರ್ಮಿಕ ಸಂಘರ್ಷವೇ ಇದಾಗಿದೆ. 'ಬ್ರಾಹ್ಮಣ ಹಾಗೂ ಶೂದ್ರ'ಸಂಸ್ಕೃತಿಯ ಮಾನವೀಯ ಮೌಲ್ಯಗಳ ಸಂಗಮ ಇಲ್ಲಿ ನಡೆಯುತ್ತದೆ. ಇಲ್ಲಿ ಧಾರ್ಮಿಕ ಸ್ಥಿತ್ಯಂತರವನ್ನು ನಾವು ಗಮನಿಸಬಹುದು. ಹೊಸ ಹೊಸ ವಿಚಾರಗಳತ್ತ, ಆಚಾರಗಳತ್ತ, ಮೌಲ್ಯಗಳತ್ತ ಜನರ ಮನಸು ನೋಡಲು ಪ್ರಾರಂಭಿಸಿದಾಗ ಸಹಜವಾಗಿಯೇ, ಇರುವ ಧಾರ್ಮಿಕ ಕಟ್ಟಳೆಗಳನ್ನು ಯಾಕೆ? ಹೇಗೆ? ಏನು? ಎಂಬ ವಿಚಾರಗಳು ಪ್ರಾರಂಭವಾಗುತ್ತವೆ. ಧಾರ್ಮಿಕ ಕಟ್ಟಳೆಗಳನ್ನು ಮೀರಿ 'ಮರುಧರ್ಮ ಸ್ಥಾಪನೆ'ಯ ಕಾರ್ಯ ನಡೆಯುತ್ತದೆ.

ಶೈವಧರ್ಮವು ತನ್ನ ಅಸ್ತಿತ್ವವನ್ನು ಕಳೆದುಕೊಂಡು, ವೀರಶೈವ ಧರ್ಮವು ಸ್ಥಾಪನೆಯಾಗುತ್ತಿರುವ ಅಂಶ ಬಹುಮುಖ್ಯವಾದುದಾಗಿದೆ. ಹಾಗೆಯೇ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ', ಎಂಬುದನ್ನು ಗಮನಿಸಿದಾಗ. 'ಸ್ಥಾವರ' ಪರಿಕಲ್ಪನೆಯನ್ನು ತೊರೆದು 'ಜಂಗಮ' ರೂಪವನ್ನು ಧರ್ಮ ಪಡೆಯುತ್ತಿದ್ದುದನ್ನು ಗಮನಿಸಬಹುದು. ಹೀಗೆ ಧಾರ್ಮಿಕ ಪಲ್ಲಟವು ಇಡೀ ಧಾರ್ಮಿಕ ಬದುಕನ್ನೆ ಪರಿವರ್ತನೆಗೆ ಒಳಪಡಿಸಿತು.

**ರಾಜಕೀಯ ಪರಿವರ್ತನೆ**

ಅನ್ಯಾಯ, ಅಸಮಾನತೆಯಂಥ ಪಾರಂಪರಿಕ ಏರುಪೇರುಗಳಿಂದಾಗಿ ಸಮಾಜದಲ್ಲಾಗುವ ಬದಲಾವಣೆಗಳಂತೆ, ರಾಜಕೀಯದಲ್ಲೂ ಪರಿವರ್ತನೆಗಳಾತ್ತವೆ. ಬಿಜ್ಜಳರಸನ ದುರ್ಬಲ ಮನೋಧರ್ಮದಿಂದಾಗಿ ಸಮಾಜದಲ್ಲಾದ ಅತಂತ್ರ ಸ್ಥಿತಿಗೆ ನ್ಯಾಯ ಒದಗಿಸಲು ಸಾಧ್ಯವಾಗಲಿಲ್ಲ. ಹೀಗಾಗಿಯೇ ಕಠೋರವಾದ ಶಿಕ್ಷೆಗೆ ವಿರುದ್ಧವಾಗಿ, ಶರಣರು ನಿಷ್ಠುರವಾದ ಉತ್ತರವನ್ನೆ ನೀಡುತ್ತಾರೆ. 'ಮುಳ್ಳಿನಿಂದಲೆ ಮುಳ್ಳನ್ನು ತೆಗೆಯಬೇಕು'. ಎಂಬಂತೆ ಹಿಂಸೆಯಿಂದ ಪ್ರಾರಂಭವಾದ ಚಳುವಳಿಯು ಹಿಂಸೆಯಲ್ಲಿಯೇ ಮುಕ್ತಾಯಗೊಳ್ಳುತ್ತದೆ.

'ಬಿಜ್ಜಳರಸ ಮತ ವಿರೋಧಿಯಲ್ಲ, ಧರ್ಮಸಹಿಷ್ಣು. ಆದರೆ ಅವನ ಮನದಲ್ಲಿ ವಿಷ ಬೀಜವನ್ನು ಬಿತ್ತಿದವ 'ಕೊಂಡೆಯ ಮಂಚಣ್ಣ'. ಕೊಂಡೆಯ ಎಂಬುದೇ ಚುಚ್ಚುವ, ಚೂಪಾದ ಚೇಳಿನ ಕೊಂಡಿಯನ್ನು ಸೂಚಿಸುತ್ತದೆ. ಹೀಗೆಯೇ ಮಂಚಣ್ಣ ಮಾಡಿದ ಕಾರ್ಯವು ಇದೇ ಆಗಿದೆ. ಜಾತಿಸಂಕರದಿಂದಾದ ಮದುವೆ, ಮದುವೆಯಿಂದಾದ ಧಾರ್ಮಿಕ ಸಂಘರ್ಷ, ಇಂಥ ಅವಕಾಶಗಳಿಗಾಗಿಯೇ ಕಾದು ಕುಳಿತ ರಾಜದ್ರೋಹಿಗಳಿಗೆಲ್ಲ ಅವಕಾಶವನ್ನು ಒದಗಿಸಿತು. ಹಾಗಾಗಿಯೇ ಬ್ರಾಹ್ಮಣರಿಂದ ಮೇಲಿಂದ ಮೇಲೆ ಒತ್ತಾಯಗಳು, ಆರೋಪಗಳ ಪಟ್ಟಿ ಹಾಗೆಯೇ, ಬೆದರಿಕೆಯ ಮಾತುಗಳು ಒಟ್ಟಾರೆಯಾಗಿ ಒಂದು ಸಂದಿಗ್ಧ ಪರಿಸ್ಥಿತಿಯ ನಿರ್ಮಾಣವಾಯ್ತು. 'ನೀವು ಬಸವಣ್ಣನನ್ನ ಬೆಳೆಯಾಕ ಬಿಟ್ಟರ, ಮ್ಯಾಲಿನೋರು ಬಂಡೇಳತಾರ, ಕಲ್ಯಾಣದಾಗ ರಕ್ತ ಪಾತ ಆಗ್ತದ, ವಿಪ್ರರ ರಕ್ತ ನೆಲಕ್ಕೆ ಬಿದ್ದರೆ ಪ್ರಳಯ ಆಗ್ತದ, ಸಿಂಹಾಸನ ಅಳಗ್ಯಾಡತದ' ಎಂಬೆಲ್ಲ ಮಾತುಗಳು ಬಿಜ್ಜಳರಸನ ಮನಸ್ಥಿತಿಯನ್ನು ಕೆಣಕಿದವು.

'ಪ್ರಭುತ್ವ ಮತ್ತು ಪರಿವರ್ತನೆ' ಎಂದಿಗೂ ಒಂದಾಗಲು ಸಾಧ್ಯವೇ ಇಲ್ಲ, ಮತ್ತು ಹಾಗಾಗಿಯೇ ಪರಿವರ್ತನೆಗೆ ಪ್ರಭುತ್ವ ಇಲ್ಲಿಯು ವಿರೋಧವನ್ನೆ ವ್ಯಕ್ತಪಡಿಸುತ್ತದೆ. ಯಾವುದೇ ಅಪರಾಧವನ್ನು ಮಾಡದ ಹರಳಯ್ಯ, ಮಧುವರಸರಿಗೆ ಅರಸನ ಎಳಹೂಟೆಯಂಥ ಕ್ರೂರ ಶಿಕ್ಷೆಯನ್ನು ವಿಧಿಸುತ್ತಾನೆ.

ಯಾರಿಗೇ ಆಗಲಿ, ಗಳಸಿಕೊಂಡ ಅಧಿಕಾರ ಯಾರದೋ, ಸಲುವಾಗಿ ಕಳೆದು ಕೊಳ್ಳುವದು ಆಗುವುದಿಲ್ಲ. ಸ್ವಾರ್ಥಕ್ಕಾಗಿ ಬದುಕುವ ಮುನುಜನಿಗೆ 'ಸಮಷ್ಠಿ ಹಿತಕ್ಕಿಂತ ಸ್ವಹಿತವೇ ಮುಖ್ಯ'ವಾಗುತ್ತದೆ. ಆಗ ಸಹಜವಾಗಿಯೇ ವ್ಯಕ್ತಿ ತನ್ನ ಅಸ್ತಿತ್ವವನ್ನುಳಿಸಿಕೊಳ್ಳಲು ಹೆಣಗಬೇಕಾಗುತ್ತದೆ. ಇಲ್ಲಿಯೂ ಅದೇ ಕಾರ್ಯ ನಡೆಯುತ್ತದೆ. ಗಳಿಸಿದ ಅಧಿಕಾರವನ್ನು ಶೃಂಗರಿಸಿ, ಆನಂದವಾಗಿ ಅನುಭವಿಸಬೇಕಾದರೆ 'ಪ್ರಾಣ'ಬೇಕು ಪ್ರಾಣವೇ ಇಲ್ಲದ ಅಧಿಕಾರ ವ್ಯರ್ಥ. ಶರಣರ ಶಿಕ್ಷೆಯಿಂದಾಗಿ ತಾಳ್ಮೆಯ ಸರಹದ್ದನ್ನು ದಾಟಿದ ಶರಣರು, ದಂಡವಾಗಿ ಬಿಜ್ಜಳನ ತಲೆಯನ್ನೆ ಪಡೆಯುತ್ತಾರೆ. ಬಿಜ್ಜಳನ ಮರಣದ ನಂತರದಲ್ಲಿ ದುರ್ಬಲ ಅರಸರ ಆಳ್ವಿಕೆಯಿಂದಾಗಿ ಕಳಚೂರ್ಯ ಸಾಮ್ರಾಜ್ಯವೇ ಅವನತಿಯ ದಾರಿ ಹಿಡಿಯುತ್ತದೆ. ಎಳಹೂಟೆ ಪ್ರಸಂಗವನ್ನು ಕುರಿತಂತೆ ನಮಗೆ ಎರಡು ಬಗೆಯ ಉಲ್ಲೇಖಗಳು ದೊರಕುತ್ತವೆ. ಒಂದು ಜನಪದ ಕಾವ್ಯ ಮತ್ತೊಂದು ಶಿಷ್ಟಕಾವ್ಯ.

ಜನಪದ ಕಾವ್ಯಗಳೂ ಕೂಡ, ಶರಣರ ಬದುಕನ್ನು ಚಿತ್ರಸುವಲ್ಲಿ ಯಶಸ್ವಿಯಾಗಿವೆ. ಬಾಯಿಂದ ಬಾಯಿಗೆ ಸಂವಹನಗೊಳ್ಳುವ ಜನಪದ ಸಾಹಿತ್ಯ, ಕಾಲದಿಂದ ಕಾಲಕ್ಕೆ, ಪರಿವರ್ತನೆಗೊಳ್ಳುತ್ತಲೇ ಬಂದಿದೆ. 'ಹರಳಯ್ಯನ ಚರಿತ್ರೆ'ಯೊಂದಿಗೆ ಬೆಸದುಕೊಂಡಿರುವ 'ಎಳಹೂಟೆ ಪ್ರಸಂಗ'ವನ್ನು ನೇರವಾಗಿ ಜನಪದ ಕಾವ್ಯಗಳಲ್ಲೆಲ್ಲ ಹಾಡದಿದ್ದರೂ, ಇದರ ಹಿಂದು ಮುಂದಿನ ಘಟನೆಗಳಾದ 'ಹರಳಯ್ಯನ ಚಪ್ಪಲಿಯ ಪ್ರಸಂಗ', 'ಬಚ್ಚಲುದಕದ ಪ್ರಸಂಗ', 'ಕ್ರಾಂತಿಯ ಅವಸಾನದ ಪ್ರಸಂಗಗಳು' ಕಂಡು ಬರುತ್ತದೆ. ಡಾ.ಫ.ಘು.ಹಳಕಟ್ಟಿಯವರು ಪ್ರಕಟಿಸಿದ 'ಹರಳಯ್ಯನ ತ್ರಿಪದಿ'ಯು ಈ ವಿಷಯವನ್ನು ಒಳಗೊಂಡಿದೆ.

ಆದರೆ ಶಿಷ್ಟ ಕಾವ್ಯಗಳಲ್ಲೆಲ್ಲ 'ಹರಳಯ್ಯನ ಚರಿತೆ,' 'ಚೆಮ್ಮಾವುಗೆಯ ಕಥೆ,' 'ಬಚ್ಚಲುದಕದ ಕಥೆಯ' ಜೊತೆಗೆ 'ಹರಳಯ್ಯ-ಮಧುವರಸರು ಬೀಗರಾದುದು,' 'ಶರಣರನ್ನು ಎಳಹೂಟೆಗೆ ಕಟ್ಟಿ ಎಳೆಸಿದ ಪ್ರಸಂಗ'ಗಳೆಲ್ಲವುದರ ಜೊತೆಗೆ, 'ಬಿಜ್ಜಳನ ವಧೆ'ಯನ್ನು ಒಳಗೊಂಡಿರುವ ಕಾವ್ಯಗಳು ಅನೇಕ. ಕಲ್ಯಾಣ ಚಳುವಳಿಯ ಸುತ್ತ ಹೆಣೆಯಲ್ಪಟ್ಟಿರುವ ಬಹುತೇಕ ಕಾವ್ಯಗಳು ಶರಣರ ಬದುಕು, ಆದರ್ಶದ ಜೊತೆಗೆ ಅಂದಿನ ಬದುಕನ್ನು ಅನಾವರಣಗೊಳಿಸುತ್ತವೆ. ಭೀಮಕವಿಯ 'ಬಸವಪುರಾಣ'ದಲ್ಲಿ ಹೃದಯ ವಿದ್ರಾವಕ ಸಂಗತಿಯಾದ ಎಳಹೂಟೆಯ ಪ್ರಸಂಗವನ್ನು ದಾಖಲಿಸಿದ್ದಾರೆ.[೩] 'ಅಸಮಕುಲವೆಂದು ಹರಳಯ್ಯ-ಮಧುವಯ್ಯಗಳ ಎಳಹೂಟೆಯಂ ಕಟ್ಟಿಸಿದ ಬಿಜ್ಜಳ ಎಂದು ಉಲ್ಲೇಖ ಕಂಡುಬರುತ್ತದೆ. ಲಿಂಗಪುರಾಣದಲ್ಲಿ 'ಮೂವತ್ತು' ಹಾಗೂ 'ಮೂವತ್ತು ನಾಲ್ಕನೆಯ' ಸಂಧಿಗಳಲ್ಲಿ ಬಹುದೀರ್ಘವಾಗಿ 'ಎಳಹೂಟೆ ಪ್ರಸಂಗವನ್ನು' ವಿವರಿಸಲಾಗಿದೆ

ಎಳಹೂಟೆಯಿಂದ ಹಳ್ಳಯ್ಯ ಮಧುವರಸರಂ
ಖಳರ ಮಾತು ಕೇಳಿ ಬಿಜ್ಜಳ ಮಹೀಪಾಲ
ನೆಳಸೆ ಬಸವಂ ಸಂಗಮಕೆ ಪೋದ
ಸಕಲ ಗಣ ಉಳವೆಯ ಕಡೆಗೆ ನಡೆದರು[೪]

ಎಂಬ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ ಚನ್ನಪ್ಪಕವಿ ವಿರಚಿತ 'ಶರಣಲೀಲಾಮೃತದಲ್ಲಿ' ಧರ್ಮಭಂಡಾರಿ 'ಬಸವಣ್ಣನವರು'[೫], 'ಕಲ್ಯಾಣಕ್ರಾಂತಿ ಹಿಂದುಮುಂದು', ಭೈರವೇಶ್ವರ ಕಾವ್ಯದ 'ಕಥಾಮಣಿಸೂತ್ರ ರತ್ನಾಕರ'ದಲ್ಲಿ, 'ಹರಳಯ್ಯ-ಮಧುವಯ್ಯ ಕುಲ ಸೂತಕವನ್ನು ಅಳಿದರು' ಎಂಬ ಕಥೆ ಬರುತ್ತದೆ. ಹಾಗೇ 'ಶಿವಶರಣರ ಕಥಾರತ್ನಕೋಶ'ದಲ್ಲಿಯೂ ಎಳಹೂಟೆ ಪ್ರಸಂಗದ ವಿವರಗಳು ಬರುತ್ತವೆ.

ಆಧುನಿಕ ಸಾಹಿತ್ಯ ಪ್ರಕಾರಗಳಲ್ಲೂ ಕೂಡ ೧೨ನೇ ಶತನಮಾನದ ಚಳುವಳಿಯನ್ನು ಹಾಗೂ ಎಳಹೂಟೆ ಪ್ರಸಂಗವನ್ನು ಉಲ್ಲೇಖಿಸಿರುವ ಅಂಶಗಳು ಕಂಡುಬರುತ್ತವೆ. ನಾಟಕಗಳಾದ ಮಹಾಚೈತ್ರ, ಸಂಕ್ರಾಂತಿ ಹಾಗೂ ತಲೆದಂಡ ಇಂಥ ಚಳುವಳಿಯ ಸುತ್ತ ಹೆಣೆಯಲ್ಪಟ್ಟ ನಾಟಕಗಳಾಗಿವೆ.

**ಶಿಕ್ಷೆಯ ಸ್ವರೂಪ** : ಹೀಗೆ ಶಿಷ್ಟಕಾವ್ಯ ಹಾಗೂ ಜನಪದ ಕಾವ್ಯಗಳಲ್ಲೆಲ್ಲ ಎಳಹೂಟೆ ಪ್ರಸಂಗದ ದಾಖಲೆಗಳು ಬರುತ್ತವೆ. ಹಾಗಾದರೆ ಬಿಜ್ಜಳ 'ಎಳಹೂಟೆ'ಯನ್ನು ಹೇಗೆ ಕಟ್ಟಿಸಿದ? ಯಾವುದಕ್ಕೆ ಕಟ್ಟಿಸಿ ಎಳಸಿದ? ಎಂಬೆಲ್ಲ ಪ್ರಶ್ನೆಗಳು ಉದ್ಭವಿಸುತ್ತವೆ. ಹಲವಾರು ಕಾವ್ಯಗಳು ಭಿನ್ನ ಭಿನ್ನ ಅಭಿಪ್ರಾಯವನ್ನು ತಾಳುತ್ತವೆ. ಬಿಜ್ಜಳ ನೀಡಿದ ಶಿಕ್ಷೆಯ ಸ್ವರೂಪವನ್ನು, ಆನೆಯ ಕಾಲಿಗೆ ಕಟ್ಟಿಸಿ ಎಳಸಿದ, ಹೋರಿಯ ಕಾಲುಗಳಿಗೆ (ಎತ್ತು) ಕಟ್ಟಿಎಳಸಿದ, ಕಣ್ಣುಕೀಳಿಸಿದ, ಶೂಲಕ್ಕೆ ಏರಿಸಿದ, ಮರಕ್ಕೆ ಕಟ್ಟಿ ಹೊಡೆಸಿದ ಎಂಬೆಲ್ಲ ವಿಚಾರಗಳು ಕಂಡು ಬರುತ್ತವೆ. ಪ್ರಸ್ತುತ ಕಾವ್ಯವು 'ಎಳಹೂಟೆ'ಪ್ರಸಂಗದ ಸ್ವರೂಪವನ್ನು ೧೬ನೇ ಸಂಧಿಯ ೪೯ನೇ ಪದ್ಯದಿಂದ ೫೫ನೇ ಪದ್ಯದವರೆಗೆ ಬಹುವಿಸ್ತಾರವಾದ ವಿವರಣೆಯನ್ನು ನೀಡುತ್ತಾನೆ.

ಮಗುಳೆ ಶರಣರು ಬಸವ ನೀಲಾಂಬಿಕೆಯರುಲಿಂ
ಗ ಗಳೊಳಗ ಮೈಕ್ಯಮಾದರುಯೆಂಬ ಚಿಂತೆಯಿಂ
ನಗರಕ್ಕೆ ತಂದರನ್ನೆಗಲಿತ್ತ ಬಿಜ್ಜಳನು ಹಳ್ಳಯ್ಯ ಮಧುವಯ್ಯನ
ಮಿಗೆ ಕೋಪದಿಂದ ಪಿಡಿತರಿಸಿ ಕೊಲಿ ಕಣ್ಣುಗಳ
ತೆಗೆಯೆನಲ್ಕೆಂದರೆಲೊ ನಿನ್ನ ಪಾಡೇನೆಮಗೆ
ಅಗಜೇಶನೊಲ್ಮೆಯುಂಟದರಿಂದ ನಿನ್ನ ಎಮ್ಮವರಿರಿದು ಕೈಗೊಯ್ವರು (೧೬-೪೯)

ಎಂಬ ನುಡಿಗೊಳುತಲರಸ ಕೋಪಮಂಗೈಸಿ
ತಾಂ ಬಲ್ಮೆಯಿಂದವರ ಕಲ್ಲುಗಾಣಕೆ ಹಾಕಿ
ರೆಂಬುತ ಚರರಿಗುಸುರೆ ಕೇಳ್ದು ಕೊಂಡೆಯ ಮಂಚಿ ಮಗುಳರಸಗಿಂತೆಂದನು
ಕುಂಭೀನೀಪತಿ ಕೇಳು ಲೋಕಮೆಲ್ಲರಿವವೊಲು
ಸಂಭ್ರಮದೊಳೆರಡೆತ್ತ ತರಿಸಿ ಎಳೆಹೂಟೆಯನು
ಇಂಬಿನೊಳು ಕಟ್ಟಿ ವೀಥಿಯೊಳೆಳಸಿ ಕೊಲವೇಳ್ಳುವೆನಲರಸನಹುದೆಂದನು (೧೬-೫೦)

ಲಾಲಿಸು ಕಲ್ಲಿನಾಥಜ ಬಿಜ್ಜಳ ಭೂ
ಪಾಲನೆರಡುಮರಲೆತ್ತುಗಳಂ ತರಿ
ಸಾಲಸ್ಯವ ಮಾಡದೆ ಶರಣರ ಕರಗಳನ್ನು ಬಿಗಿದುಕಟ್ಟಿ
ಮೇಲೆಳೆಹೂಟಿಯ ಬಂಧಿಸಿ ಪೊಡೆಯಲು
ಬಾಲಗಳನ್ನೆವುತ ನೆಲವೊಂದದೆ
ತಾಳುಗೆಯಿಂ ಬಾಂಬಟ್ಟೆಯೊಳಗೆ ನಡೆದವುಮಾ ವೃಷಭಗಳು (೧೬-೫೧)

ಅದ ಕಾಣುತ ಬಿಜ್ಜಳನಚ್ಚರವ
ಟ್ಟಿದುಮೇಂ ಕಾರಣಮೆನಲಿವು ಮರಲೆ
ತ್ತಿದರವಗೆಯು ಪಳೆಯೆತ್ತುಗಳಂ ತರಿಸಿಳೆಹೂಟೆಯ ಕಟ್ಟಿ
ಕದುಬೆಳಸಲು ನೆಲದೊಳಗೆಳೆವುತ ತನು
ಪದೆದಳಿವುದುಮಂತೊಡರಿಚುಮೆಂದೆನು
ತದುಮನಳಿಯ ಬಿಜ್ಜಳನುಸುರಲ್ಕರಸನುಮಂತಹುದೆಂದ (೧೬-೫೨)

ಬಳಿಕಲೆರಡು ಪಳೆಯ ಎತ್ತುಗಳ ತರಿಸಿ
ಸ್ಥಳಮರಿಯದಲೆಳೆ ಹೂಟಿಯ ಕಟ್ಟಿಸಿ
ಎಳಸಲ್ಕಾ ಶಕಟಂಗಳುಮಾಗಸವಟ್ಟೆಯೊಳಗೆ ಪರಿಯೆ
ಇಳೆಯಾಧೀಶ್ವರ ಕಾಣುತ ಲಜ್ಜೆಯ
ತಳೆದುರೆ ಪಟ್ಟವಣೆಯನುಳಿದೇಳುತ
ಲಲನೆಯನಿತ್ತನ ಕಣ್ಣೆಗೆದಿಬ್ಬರ ಶೂಲಕೆ ಹಾಕೆಂದ (೧೬-೫೩)
ಇಂತೆನ್ನು ತೊರೆದರಮನೆಗೈದಲುಚರ
ರುಂ ತಡೆಯದೆ ಮಧುವಯ್ಯಗಳಂಬಕ
ಮಂ ತೆಗೆದರುಮಭವನ ಕೃಪೆಯುಳ್ಳರಿಗೆಯುಮ ಪಜಯವುಂಟೆ
ಸಂತತ ಪಳೆಗಣ್ಣೋಗಲು ಪೊಸಗ

ಣ್ಣಂ ತವೆ ಬಂದವು ಚರರುಂ ಕಾಣುತ

ಲಿಂತಿದು ಪೊಸತೆನುತಲಚ್ಚರಿವಟ್ಟು ಮಗುಳೆ ತಮ್ಮೊಳು ನುಡಿಯೆ (೧೬-೫೪)

ಏನಾದುದು ಆಗಲಿ ನಮ್ಮೆರೆಯನು

ತಾನೊರೆದಂತೆ ಒಡರ್ಚುವೆನೆನುತಲಿ

ಹೀನಮನೋಡದೆ ಶೂಲಕೆ ಹಾಕುವೆನೆನುತ ಪಿಡಿದು ತರಲು

ಊಣೆಯಮಿಲ್ಲದೆ ನಾಂಟಿಹ ಶೂಲನ

ವೀನ ಕುಸುಮ ಪತ್ರೆಗಳಂ ಬಿಲ್ವಿದ

ಭೂನುತವೃಕ್ಷಮೆನಲುಮೊವಪ್ಪಿರಲುರೆವೆಗಾದರು ಚರರು (೧೬-೫೫)

ಹೀಗೆ ಬಹು ದೀರ್ಘವಾಗಿ ಕಾವ್ಯದಲ್ಲಿ 'ಎಳಹೂಟೆ ಪ್ರಸಂಗ'ವನ್ನು, ಶರಣರಿಗೆ ಶಿಕ್ಷೆ ವಿಧಿಸಿದ ಪರಿ ಯಾವದು? ಎಂಬುದರ ವಿವರಣೆಯನ್ನು ಕವಿ ಒದಗಿಸುತ್ತಾನೆ. ಹೀಗಾಗಿ ಶಿಕ್ಷೆಯ ಸ್ವರೂಪ ಎಂಥದ್ದು? ಎಂಬ ಪ್ರಶ್ನೆಗೆ ಇಲ್ಲಿ ಸ್ಪಷ್ಟ ಉತ್ತರವನ್ನು ಹೀಗೆ ಕಂಡುಕೊಳ್ಳಬಹುದು. ಆನೆಕಾಲಿಗೆ ಕಟ್ಟಿಸಿದ್ದು, ಮರಕ್ಕೆ ಕಟ್ಟಿಸಿದ್ದು ಇತ್ಯಾದಿ ಭಿನ್ನ ಅಭಿಪ್ರಾಯಗಳನ್ನೆಲ್ಲ ತೆರೆಗೆ ಸರಿಸಿ, ಇಲ್ಲಿ 'ಎತ್ತಿನ ಕಾಲಿಗೆ ಕಟ್ಟಿ ಎಳಸಿದ್ದು' ಎಂಬ ಅಂಶವೇ ಸತ್ಯವಾದುದಾಗಿದೆ.

ವೃಷಬೇಂದ್ರ ವಿಳಾಸದ ಕೃತಿಯೊಂದರಲ್ಲಿ 'ಎಳಹೂಟೆ ಪ್ರಸಂಗ'ವನ್ನು ಚಿತ್ರಸಹಿತವಾಗಿ ವಿವರಿಸುವ ಹಸ್ತಪ್ರತಿಯೊಂದು ಇತ್ತೀಚೆಗೆ ಪ್ರಕಟವಾಗಿದೆ. ಅದರಲ್ಲಿ 'ಎತ್ತಿನ ಕಾಲಿಗೆ ಕಟ್ಟಿ ಎಳಸಿದ' ಛಾಯಚಿತ್ರವಿದೆ. ಹೀಗಾಗಿ ಈ ಅಂಶಕ್ಕೆ ಹೆಚ್ಚು ಪುಷ್ಠಿ ದೊರೆಯುತ್ತದೆ.

'ಎಳಹೂಟೆ ಪ್ರಸಂಗ' ನಡೆದದ್ದಂತು ಸತ್ಯ. ಆದರೆ ಇಂದು ಕಲ್ಯಾಣದಲ್ಲಿ ಈ ಬಗೆಯ ಕುರುಹುಗಳೇನು ಸಿಗುವುದಿಲ್ಲ. ಹೃದಯ ವಿದ್ರಾವಕವಾದ 'ದೇಹಾಂತ ಶಿಕ್ಷೆ' ಶರಣರಿಗೆ ನೀಡಿದ ಬಗ್ಗೆ ಸ್ಥಳೀಯರು ನೀಡುವ ಮಾಹಿತಿಗಳು ಮಾತ್ರ ದೊರಕುತ್ತವೆ ಹೀಗೆ ಮಧ್ಯಕಾಲೀನ ಕರ್ನಾಟಕವು ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸುವಂಥ ಕಾಲಘಟ್ಟ ಪ್ರಮುಖವಾಗಿ ಇಲ್ಲಿ 'ಶರಣ-ಶೂದ್ರ' ಸಂಸ್ಕೃತಿಗಳಲ್ಲಿಯ ತತ್ವಸಿದ್ಧಾಂತಗಳಿಗೆ ಪೂರಕವಾಗುವ ಅಂಶಗಳನ್ನು ತೆಗೆದುಕೊಂಡು ಹೊಸಧರ್ಮ ಒಂದನ್ನು ಹುಟ್ಟು ಹಾಕಿದ ಕಾಲವದು.

**೩.೪. ಪವಾಡಗಳು**

೧೨ನೇ ಶತಮಾನದಿಂದ ಮೊದಲಾಗುವ ನಮ್ಮ ವೀರಶೈವ ಪುರಾಣ ಪರಂಪರೆಯಲ್ಲಿ ಪವಾಡಗಳಿಗೆ ಬಹುಮುಖ್ಯ ಸ್ಥಾನವಿದೆ. ಶಿವಭಕ್ತ ಮಹಾಪುರುಷರ ಮಹಿಮೆಯನ್ನು ಬಣ್ಣಿಸುವ, ಪುರಾಣ, ಚರಿತ್ರೆ ಲೀಲೆ, ವಿಜಯ, ವಿಲಾಸ, ಕಾವ್ಯ, ಚಾರಿತ್ರ್ಯಗಳೆಲ್ಲವೂ ಪವಾಡ ಭೂಯಿಷ್ಠವಾಗಿರುತ್ತವೆ.

ಮಹಾಯೋಗಿಯಾದವ ಸ್ವಸಿದ್ಧಿಗಾಗಿ ಅಪ್ರಾಕೃತ, ಅಮಾನುಷ ಶಕ್ತಿಯುಳ್ಳವನಾಗಿದ್ದರಿಂದ ಆತನ ಸಹಜ ಕ್ರಿಯೆಗಳೇ, ಮಾನವನ ಶಕ್ತಿಮೀರಿ ನಿಲ್ಲುವವು. ಆಗ ಜನಸಾಮಾನ್ಯರ ದೃಷ್ಟಿಯಲ್ಲಿ ಅವು ಪವಾಡಗಳಾಗಿ ದಾಖಲಾಗುತ್ತವೆ. ಹಾಗೂ ಪವಾಡಪುರುಷನನ್ನು ದೈವೀ ಸ್ವರೂಪವಾಗಿ ಕಾಣುತ್ತಾರೆ. ಹೀಗಾಗಿಯೇ ಬಸವಣ್ಣ, ಅಲ್ಲಮ, ಸಿದ್ಧರಾಮ, ಹಾವಿನಾಳ ಕಲ್ಲಯ್ಯ, ರೇವಣಸಿದ್ಧ ಹೀಗೆ ಅನೇಕ ಶರಣರು ಅಗಾಧವಾದ ಶಕ್ತಿಯನ್ನು ಪಡೆದು ಶಿವಧರ್ಮದ ಸ್ಥಾಪನೆಗಾಗಿ ಪವಾಡಗಳನ್ನು ಮಾಡುತ್ತ ಬಂದಿದ್ದಾರೆ.

ಪುರಾಣ ಎಂದರೆ "ಪುರಾನಿಯತೇ ಇತಿಪುರಾಣಂ" ಅಂದರೆ ಹಿಂದಿನ ಕಾಲಕ್ಕೆ ನಮ್ಮನ್ನೊಯ್ಯತಕ್ಕದ್ದೇ ಪುರಾಣ. ಹೀಗೆ ಪುರಾಣವೆಂಬುದು ಹಿಂದಿನ ಕಾಲಕ್ಕೆ ನಮ್ಮನ್ನು ಕರೆದೊಯ್ಯುವಾಗ ವಾಸ್ತವ ಸಂಗತಿಗಳನ್ನು ಮರೆಮಾಚಿ, ಕೃತ್ರಿಮವಾದ ಸಂಗತಿಗಳನ್ನು ಬಿತ್ತಿರಿಸುವ ಸಾಧ್ಯತೆ ಇದೆ. ಹಾಗಾಗಿಯೇ ನಮ್ಮ ಕಾವ್ಯ, ಪುರಾಣಗಳೆಲ್ಲ ಐತಿಹಾಸಿಕ ವ್ಯಕ್ತಿಗಳನ್ನೆಲ್ಲ ಒತ್ತಾಯಪೂರ್ವಕವಾಗಿ, ಪುರಾಣೀಕೃತಗೊಳಿಸುವ ಕಾರ್ಯವನ್ನು ಮಾಡುತ್ತಿವೆ. ಈ ವೈಭವೀಕರಣದಿಂದಾಗಿಯೇ, ಇತಿಹಾಸ ಮರೆಮಾಚಿ ಪುರಾಣವೇ ಮುಖ್ಯವೆನಿಸುತ್ತದೆ. ಮೊಲ್ಲೆಬೊಮ್ಮಯ್ಯಗಳ ಕಾವ್ಯವೂ ಕೂಡ ಇದೇ ಸಾಲಿಗೆ ಸೇರುವಂಥದ್ದು.

ಮಹಾಮಹಿಮನಾದ ಮೊಲ್ಲೆಬೊಮ್ಮಯ್ಯನ ಬದುಕಿಗೆ ಸಂಬಂಧಿಸಿದ ಅಪೂರ್ವ ಘಟನೆ ಇಲ್ಲವೇ ಪವಾಡಗಳನ್ನು ಇಲ್ಲಿ ಕವಿ ಧೂಪದ ರಾಚೇಶ ದಾಖಲಿಸಿದ್ದಾನೆ. ಈತ ಪವಾಡಗಳನ್ನೆಲ್ಲ ಕಣ್ಣಾರೆ ಕಂಡವನಲ್ಲ, ಏಕೆಂದರೆ ಮೊಲ್ಲೆಬೊಮ್ಮಯ್ಯನ ಕಾಲಕ್ಕೂ ಕೃತಿ ರಚನೆಗೊಂಡ ಕಾಲಕ್ಕೂ ೬ ಶತಮಾನಗಳ ಅಂತರವಿದೆ. ಕಾಲದೊಂದಿಗೆ ಐತಿಹಾಸಿಕ, ಭೌಗೋಳಿಕ ಅಂತರಗಳು ಇವೆ. ಹೀಗಾಗಿ ಘಟನೆಯನ್ನು ಹೆಚ್ಚು ವೈಭವೀಕರಿಸಿ, ಅನೇಕ ಪವಾಡಗಳನ್ನು ಮಾಡಿದರೆಂಬಂತೆ ಕಥೆಯನ್ನು ಕಟ್ಟಿರುವ ಸಾಧ್ಯತೆ ಇದೆ. ಭಾರತೀಯರು ಅದರಲ್ಲೂ ಸಂಪ್ರದಾಯಬದ್ಧ ಜನರಿಗೆ ಚಾರಿತ್ರಿಕ ಪ್ರಜ್ಞೆಯೇ ಇಲ್ಲ. ಕೇವಲ ದೈವದ ಬಗೆಗೆ, ದೈವದ ಪವಾಡಗಳಿಗೆ ನಮ್ಮೆಲ್ಲ ಆಸಕ್ತಿ. ಹೀಗಾಗಿಯೇ ಇತಿಹಾಸದ ಕೊಂಡಿಗಳೆಲ್ಲ ದೂರಸರಿದು, ವಸ್ತುನಿಷ್ಠತೆ ಕಳಚುತ್ತಿದೆ.

ಬಸವಣ್ಣನನ್ನೆ ನಾವು ಉದಾಹರಣೆಯಾಗಿ ತೆಗೆದುಕೊಂಡರೆ, 'ಬಸವಣ್ಣ ಪವಾಡ ಪುರುಷ.' ನಮ್ಮ ವೀರಶೈವ ಪರಂಪರೆಯಲ್ಲೆಲ್ಲ ಬಸವಣ್ಣ ೮೮ ಪವಾಡಗಳನ್ನು ಮಾಡಿದ ಎಂದು ಉಲ್ಲೇಖಿಸುತ್ತಾರೆ. ಆದರೆ ಈ ಎಲ್ಲಾ ಪವಾಡಗಳು ಯಾವ ರೀತಿ ಬೆಳೆದು ಬಂದಿರಬೇಕು ಎಂಬುದನ್ನು ಟಿ.ಎಸ್.ವೆಂಕಣ್ಣಯ್ಯನವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಗಮನಾರ್ಹವಾಗಿವೆ.

'ಬಸವಣ್ಣನನ್ನು ಕಂಡದ್ದು ಆತನ ಕಾರ್ಯಕಲಾಪಗಳನ್ನು ನೋಡಿದ್ದ ಸಮಕಾಲೀನರಾರೂ ಆತನ ಜೀವನ ಚರಿತ್ರೆಯನ್ನು ಬರೆದಿಡಲಿಲ್ಲ. ಆತನು ಕಾಲವಾದ ಅನೇಕ ವರ್ಷಗಳ ನಂತರ ವೀರಶೈವ ಕವಿಗಳು ಆತನ ಚರಿತ್ರೆಯನ್ನು ಪುರಾಣರೂಪವಾಗಿ ರಚಿಸಿದರು. ಸ್ವಾಭಾವಿಕವಾಗಿಯೇ ಅವರು ತಮ್ಮ ಸುತ್ತಮುತ್ತಲಿನ ಜನರಿಂದ ತಾವು ಕೇಳಿದ ಕಥೆಯನ್ನು ತಮ್ಮ ಗ್ರಂಥಗಳಲ್ಲಿ ಬರೆದಿಟ್ಟರು. ಜನರ ಬಾಯಲ್ಲಿ ಕಥೆ ಬೆಳೆಯುವಾಗ ಅನೇಕ ಮಾರ್ಪಾಡುಗಳಾಗುವುದು ಸ್ವಾಭಾವಿಕ. ಕವಿಗಳು ತಮ್ಮ ಕಾವ್ಯದ ಸೊಬಗನ್ನು ಹೆಚ್ಚಿಸುವುದಕ್ಕಾಗಿಯೋ, ಕಥಾನಾಯಕನ ಮಹತ್ವವನ್ನು ಉಜ್ವಲಗೊಳಿಸುವುದಕ್ಕಾಗಿಯೋ, ಕಥೆಯಲ್ಲಿ ತಮಗೆ ಸೂಕ್ತ ತೋರಿದಂತೆ ಕೆಲವು ವ್ಯತ್ಯಾಸ ಮಾಡಿಕೊಳ್ಳುವುದುಂಟು. ಕಥೆಯನ್ನು ಹರಡಿದ ಜನರಿಗಾಗಲಿ, ಪುರಾಣಗಳನ್ನು ಬರೆದ

ಜನರಿಗಾಗಲಿ, ಬಸವಣ್ಣನ ಅಲೌಖಿಕ ಮಹಿಮೆಯ ಕಡೆಗೆ ಗಮನವಿತ್ತೇ ಹೊರತು, ಆತನ ಜೀವನದಲ್ಲಿ ನಡೆದ ಸತ್ಯಸಂಗತಿಗಳಾವುವನ್ನು ತಿಳಿದುಕೊಳ್ಳುವುದರಲ್ಲಿ ಕುತೂಹಲವಿರಲಿಲ್ಲ. ಆದ ಕಾರಣ ಈ ಪುರಾಣಗಳಲ್ಲಿ ನಿಜವಾಗಿ ನಡೆದ ಸಂಗತಿಗಳೂ, ಕಲ್ಪಿತವಾದವೂ, ಕಲಬೆರಿಕೆಯಾಗಿ ಹೋಗಿರುವುದು ಸ್ವಾಭಾವಿಕವಾಗಿದೆ. ಜೀವನಕ್ಕೆ ಸಂಬಂಧಿಸಿದ ಸಂಗತಿಗಳಿಗಿಂತಲೂ ಅದ್ಭುತವಾದ ಪವಾಡಗಳಿಗೆ ಅವುಗಳಲ್ಲಿ ಹೆಚ್ಚಿನ ಸ್ಥಾನ ದೊರಕುತ್ತದೆ.[೬]

ಮೊಲ್ಲೆಬೊಮ್ಮಯ್ಯನ ಕಾವ್ಯವೂ ಈತನ ಜೀವನಕ್ಕೆ ಸಂಬಂಧಿಸಿದಂತೆ ಜನನ, ಬಾಲ್ಯ, ಮದುವೆ, ದುಷ್ಟರ ಸಂಹಾರ, ಶಿವದ್ರೋಹಿ ವಧೆ ಇವು ಸಿಗುವ ಚಾರಿತ್ರಿಕ ಸಂಗತಿಗಳಲ್ಲದೆ, ಅವುಗಳಲ್ಲಿನ ಲೀಲೆಯನ್ನು ಒಳಗೊಂಡಿವೆ. ಅಷ್ಟೇ ಅಲ್ಲದೆ, ಬಸವಣ್ಣನವರ ಜನನಕ್ಕೆ ಸಂಬಂಧಿಸಿದಂತೆ ಜನನ, ಉಪನಯನ, ಮದುವೆ, ಮಂತ್ರಿಪದವಿ, ಕೊಪ್ಪರಿಗೆ ಹೊನ್ನ ಪ್ರಸಂಗ, ಕಲ್ಯಾಣ ಬಿಟ್ಟು ಸಂಗಮದತ್ತ ಸಾಗಿದ ಲೀಲೆಗಳನ್ನು ಒಳಗೊಂಡಿದೆ. ಹರಳಯ್ಯ, ಮಧುವರಸರ ಪ್ರಸಂಗ, ಬಚ್ಚಲುದಕದ ಪ್ರಸಂಗ ಹೀಗೆ ಒಟ್ಟಾರೆಯಾಗಿ ಮೊಲ್ಲೆಬೊಮ್ಮಯ್ಯಗಳ ಕಾವ್ಯದಲ್ಲಿ ಕವಿ ಧೂಪದ ರಾಚೇಶನು ಕಾವ್ಯನಾಯಕನನ್ನು ವೈಭವೀಕರಿಸುವುದು. ಅದಕ್ಕೆ ಪೂರಕವೆಂಬಂತೆ ಬಸವಣ್ಣ, ಹರಳಯ್ಯ ಮಧುವರಸರ ಲೀಲೆಗಳು ಬಂದರೂ, ಇವರು ಪುರಾಣ ಮರೆಯದ ಪವಾಡ ಪುರುಷರು. ಹೀಗಾಗಿ ಧೂಪದ ರಾಚೇಶನು ಪವಾಡವನ್ನು ಹೆಣೆಯುವಲ್ಲಿ ತನ್ನ ಪ್ರೌಢಿಮೆಯನ್ನು ಬೆಳಸಿ ಮೊಲ್ಲೆಬೊಮ್ಮಯ್ಯನ ಪವಾಡ, ಬಸವಣ್ಣನ ಪವಾಡ, ಚೆಮ್ಮಾವುಗೆಯ ಪವಾಡ ಎಲ್ಲದಕ್ಕೂ ಅಷ್ಟೇ ಮಹತ್ವವನ್ನು ನೀಡಿ ಸಮತೂಕವನ್ನು ಕಾಯ್ದುಕೊಂಡು ಬಂದಿದ್ದಾನೆ.

ಸಾಮಾನ್ಯವಾಗಿ ಎಲ್ಲ ಪುರಾಣ, ಕಾವ್ಯಗಳಂತೆ ಇಲ್ಲೂ 'ಅವತಾರದ ಕಲ್ಪನೆ' ಬರುತ್ತದೆ. ಕೈಲಾಸದಲ್ಲಿ ತಾವು ಮಾಡಿದ ತಪ್ಪಿಗೆ ಶಾಪಗ್ರಸ್ತರಾಗಿ ಭೂಲೋಕದಲ್ಲಿ ಅವತರಿಸುವುದು ಒಂದು ಕಾರಣವಾದರೆ, ಭೂಲೋಕದಲ್ಲಿ ಹೆಚ್ಚಾದ ಪಾಪ ನಾಶಕ್ಕೆ ಶಿವನೇ ತನ್ನ ಪ್ರತಿರೂಪವನ್ನು ಭೂಮಿಗೆ ಕಳಿಸುವುದು ಸಾಮಾನ್ಯ. ಬಿಜ್ಜಳನೆಂಬ ಧರಣೀಂದ್ರನಿಗೆ ಆವರಿಸಿದ ಮದವು ಶರಣರನ್ನು ಬಾಧಿಸಲು, ಮೊಲ್ಲೆ ಬೊಮ್ಮಯ್ಯನೆಂಬ ಶರಣ ಅವನ ವಧಿಸುವ ಉದ್ದೇಶದಿಂದಲೇ ಕೈಲಾಸದಿಂದ ಅವತರಿಸಿದ ಅವತಾರ ಪುರುಷ. ವೀರಗಣೇಶ್ವರನೇ ಈ ಮೊಲ್ಲೆಬೊಮ್ಮಯ್ಯ.

ಕೈಲಾಸದ ಅಥವಾ ದೇವಲೋಕದ ಕಲ್ಪನೆ ಎಷ್ಟೊಂದು ಸುಂದರವಾಗಿದೆ. ಎಂದರೆ ಯಾರಿಗೂ ಕೈಲಾಸ ಬಿಟ್ಟು ಭೂಲೋಕಕ್ಕೆ ಬರುವ ಇಚ್ಛೆ ಇಲ್ಲ. ಶಿವನಿಗೆ ಬೊಮ್ಮಯ್ಯ ಪ್ರಶ್ನಿಸುತ್ತಾನೆ. 'ಮರ್ತ್ಯದಿ ಬಾಳುಗೆಟ್ಟು ಒಗೆದ ಬಳಿಕ ದುಶ್ಶೀಲನಾಗುವೆನೆಂತು ತಾಹಿರಿಯೆನಲು' ಶಿವನೆಂದ ಕೇಳು ಮಗನೆ ನೀನು ಪೃಥ್ವಿಯಲ್ಲಿ ಜನಿಸಿದರೂ ಮತ್ತಮತಿಯಿಂದ, ಸುಮತಿಯಿಂದ, ಭಕ್ತ ಪಾರಮ್ಯವನ್ನು ಹೊಂದುವಿರಿ, ನಿಮ್ಮನ್ನು ಭಕ್ತನೆಂದು ಒಪ್ಪುವೆವು ಇದು ಸತ್ಯ ಹೋಗು ಎನ್ನುತ್ತಾನೆ. ಈ ಮಾತು ತನ್ನ ಕಾರ್ಯಸಿದ್ಧಿಯ ನಂತರ ಮತ್ತೆ ಭೂಲೋಕದಿಂದ ಕೈಲಾಸಕ್ಕೆ ಹೋಗುವ ಇಚ್ಛೆಯನ್ನು ಕವಿ ಪಾತ್ರದ ಮೂಲಕ ಹೇಳಿಸುತ್ತಾನೆ.

ಜನಿಸಿದ ಯಾವ ವ್ಯಕ್ತಿಯು ಖಾಯಂ ಆಗಿ ಇರಲು ಸಾಧ್ಯವಿಲ್ಲ. ಹುಟ್ಟಿದವ ಸಾಯಲೇಬೇಕು ಎಂಬುದನ್ನು 'ಮಣ್ಣಿಂದ ಹುಟ್ಟಿದ ಜೀವ ಮಣ್ಣಲ್ಲೆ ಒಂದಾಗ ಬೇಕು' ಎಂಬಂತೆ ಕೈಲಾಸದಿಂದ ಜನಿಸಿದ ದೇಹ ಕೈಲಾಸದಲ್ಲಿಯೇ ವಿಲೀನವಾಗುತ್ತದೆ. 'ಶಿವನಾಂಶ'ವೇ ಕಲ್ಲಮ್ಮಳ ಉದರದಲ್ಲಿ ಮೂಡಲು ಆಕಾಶದಲಿ

'ಧೂಮಕೇತು'ವಿನ ಸೂಚನೆಯಾಗುತ್ತದೆ. ಧೂಮಕೇತು, ಆಕಾಶವಾಣಿಗಳೆಲ್ಲ ರಾಮಾಯಣ, ಮಹಾಭಾರತಗಳಲ್ಲಿದ್ದಂತೆ ಕೇಡಿನ ಸಂಕೇತ. ಇಲ್ಲಿ ಅರಸ ಬಿಜ್ಜಳನಿಗೆ ಮುಂದೊದಗಬಹುದಾದ ಕೇಡನ್ನು ಇದು ಸಂಕೇತಿಸುತ್ತದೆ. ತ್ರಿಲೋಕ ಸೃಷ್ಟಿಸುವ ಕಲ್ಲೇಶ ಚೋರತನದಿಂದ ಮಗುವನ್ನು ರಾತ್ರಿ ಎತ್ತಿಕೊಂಡು ಹೋದರು. ಇಡೀ ರಾತ್ರಿಯೆಲ್ಲ ಕಲ್ಲೇಶನ ಸನ್ನಿಧಿಯಲ್ಲಿ ಆನಂದವಾಗಿ ಮಗು ಇರುವುದು ಶಿವನ ಲೀಲೆಯೇ? ಹಾಗೆಯೇ ಬಾಲಕ ಬೊಮ್ಮಯ್ಯ ಕಾಯುವ ಪಶುಗಳು ಅದೃಶ್ಯವಾಗುವುದು, ಕಲ್ಲೇಶ ಪುಟ್ಟ ಬಾಲಕನಿಗೆ ಇಡೀ ಹೊಲದ ಬೆಳೆಯ ಮೂಲವನ್ನು ಕೀಳುವಂತೆ ಆಜ್ಞಾಪಿಸುದು. ಅದರಂತೆ ಬಾಲಕ ಸಸಿಯ ಮೂಲವನ್ನೆಲ್ಲ ಕಿತ್ತೊಗೆಯುವದು. ಇತ್ಯಾದಿಗಳು ಅತಿಮಾನುಷವಾದ ಕಾರ್ಯವಾಗಿವೆ. ಹೀಗೆ ಅತಿಮಾನುಷವಾದ, ಅಸಾಮಾನ್ಯ ವ್ಯಕ್ತಿತ್ವವನ್ನು ಹೊಂದಿದ ಈತ ಹೀಗೆ ಅನೇಕ ಪವಾಡಗಳನ್ನು ಮಾಡುತ್ತಾನೆ. ಕಲ್ಲೇಶ, ಬೊಮ್ಮಗೌಡ ನಡುವಿನ ಜಗಳ ನಿರ್ಣಯಿಸಲೆಂದು ನ್ಯಾಯಕಟ್ಟೆಯಲ್ಲಿ ಪುರಜನರು ಬರಲು ಅದೃಶ್ಯದಿಂದ ಹೊಲದ ಬೆಳೆಯೆಲ್ಲ ಅದ್ಕಕ್ಕಿಂತಲೂ ಸಮೃದ್ಧ ಫಲ ಅಲ್ಲಿದ್ದಿದ್ದು ಪವಾಡವೇ.

'ಹಠಯೋಗದಿಂದ ಪ್ರಾಪ್ತವಾಗುವ ಸಿದ್ಧಿಯನ್ನು ಪವಾಡ' ಎಂದು ಕರೆಯಲಾಗುತ್ತದೆ. ಹೀಗೆ ಕಲ್ಲೇಶನ ಹಠ ಪ್ರವೃತ್ತಿಯಿಂದಲೇ ಈ ಪವಾಡಗಳು ನಡೆದವು.[೭] ಮೈಗುಂಡಿಯ ಕಾಮರಾಜನ ಮಗಳನ್ನು ಕಲ್ಲೇಶನಾಜ್ಞೆಮೇರೆಗೆ ಕೇಳಿದಾಗ ಪಂಪಾಂಬೆ 'ಹುಚ್ಚು ಹಿಡಿದಿದೆಯೊ' ಎಂದು ಅನೇಕ ಬಗೆಯಾಗಿ ಬಯ್ಯುತ್ತಾಳೆ. ಅರಮನೆಯ ಜನರೆಲ್ಲ ಅಪಹಾಸ್ಯ ಮಾಡುತ್ತಾರೆ. ಹೀಗೆ ಅವಮಾನಿತ ಬೊಮ್ಮಯ್ಯ ಕಲ್ಲೇಶನನ್ನು ನೆನೆಯುತ್ತಾ ಕಲ್ಲೂರಿಗೆ ಬರುತಿರಲು ಕಲ್ಲೇಶನು 'ಭೂವಲ್ಲಭನ ಸೌಧಾಗ್ರದೊಳಗೆ ಮಾಯದ ಅಗ್ನಿ'ಯನ್ನು ಹೊತ್ತಿಸಿದ. ಹತ್ತಿ ಉರಿಯುವ ಅಗ್ನಿಯನ್ನು ತಣಿಸಲು ಆಗದ, ಅರಸ ತನ್ನ ತಪ್ಪನ್ನು ಮನ್ನಿಸೆಂದು ಬೊಮ್ಮಯ್ಯನನ್ನು ಬೆಂಕಿ ಆರಿಸುವಂತೆ ಕೇಳಿಕೊಳ್ಳುತ್ತಾನೆ. ತನ್ನ ಮಗಳನ್ನು ನಿನಗೆ ನೀಡುವೆನೆನಲು, ಬೊಮ್ಮಯ್ಯ ಅರಮನೆಯಲ್ಲಿ ಕಾಲಿಡಲು ಸೂರ್ಯನ ಉದಯದಿಂದ ಮಂಜು ಕರಗುಂತೆ, ನಿಶೆ ಅಂಜಿ ಅಡಗುವಂತೆ ಧನಂಜಯವು ಬಯಲಾಯ್ತು. ಬೊಮ್ಮಯ್ಯನ ಭಕ್ತಿ, ಶ್ರದ್ಧೆಗಳನ್ನು ಗಟ್ಟಿಗೊಳಿಸುವ ಉದ್ದೇಶದಿಂದ ಮತ್ತು ಲೋಕಾನುಕಂಪನದಿಂದ ಸನ್ನಿವೇಶಕ್ಕೆ ತಕ್ಕಂತೆ ಪ್ರದರ್ಶಿಸುವ ಅಘಟಿತ ಘಟನೆ ಇದಾಗಿರಬಹುದೆನಿಸುತ್ತದೆ.

ವೀಣೆನುಡಿಸುವ ಕಾಯಕದಲ್ಲಿ ಉನ್ಮಾದದಿಂದ ನಿರತನಾದ ಬೊಮ್ಮಯ್ಯನ ಪೂರ್ವವೃತ್ತಾಂತಗಳನ್ನು ಕೇಳಿದ ಚೌಂಡರಸ ತನ್ನ ಮಂತ್ರಿಗಳನ್ನು ಕರೆತರಲು ಕಳಿಸಿದನು. ಅವರು ನಾನಾ ತೆರನಾಗಿ ಕರೆದರು ಕೇಳದೇ, ತನ್ನ ಕಾರ್ಯದಲ್ಲಿ ಮಗ್ನನಾದ ಬೊಮ್ಮಯ್ಯನ ಕೈಹಿಡಿದರೂ, ತಂತಿ ಮೀಟುವ ಬೆರಳುಗಳು ನಿಲ್ಲಲಿಲ್ಲ, ಬೆರಳು ಹಿಡಿದಡೆ ತಂತಿ ತಾನೆ ತಾನಾಗಿ ಮೀಟಲು. ದೇಗುಲದ ಜನರೆಲ್ಲ ಆಶ್ಚರ್ಯದಿಂದ ನೋಡಿದರು.

ತಂತಾನೆ ವೀಣೆ ಮೀಟುವದು 'ಕುಟಿಲ ವಿದ್ಯೆಯೇ' ಎಂದು ತಿಳಿದ ಅರಸ ಕುಟಿಲ ವಿದ್ಯೆಯಲ್ಲಿ ಪರಿಣಿತನಾದವನನ್ನು ಕರೆತರಲು ಕಳುಹಿಸಿದನು. ಆಗ ಮಂತ್ರಿಯು 'ಚೌಲದಬಂಟನನ್ನು' ಕರೆತರುವನು. 'ಕುಟಿಲವಿದ್ಯಾಸಂಪನ್ನ'ನಾದ 'ಚೌಲದಬಂಟನು ಅಪಾರ ಶಕ್ತಿ, ಸಾಮರ್ಥ್ಯವನ್ನು ಹೊಂದಿದ್ದನು. ಹಾಗಾಗಿಯೇ

ಭೂತಗಳೆಲ್ಲವು ಆತನ ಸೇವೆಯನ್ನು ಉತ್ಸಾಹದಿಂದ ಮಾಡುತ್ತಿದ್ದವು.

ಶಾಂತಭೈರವನು ಕರೆಯಲು ಹೋದರೆ, ಬೊಮ್ಮಯ್ಯ ಸೇವೆ ನಿರತನಾಗಿದ್ದನು. ಇದರಿಂದ ಕೋಪಗೊಂಡ ಚೌಲದಬಂಟನು ಬಗೆಬಗೆಯಾಗಿ ಊರ ಜನರನ್ನು ಕಾಡತೊಡಗಿದನು. ಊರ ಸುತ್ತಲೂ ಭೀತಿ ಆವರಿಸುವಂತೆ ಮಾಡಿದನು. ಊರಜನರಲ್ಲಿ ಕೆಟ್ಟೆವೆನುತ ತಮ್ಮೊಳಗೆ ಚಿಂತಿಸ ತೊಡಗಿದರು.

ಅಷ್ಟದಿಕ್ಕಿನಲಿ ರಕ್ಕಸ, ಜಟ್ಟಿಗಳು, ಭೂತಗಳು, ಬೇತಾಳಗಳು ಬ್ರಹ್ಮರಾಕ್ಷಸರ ಕುಲ, ಜೋಗಿಯರು, ಖೇಚರ ಮತ್ತ ಚೌಲದಬಂಟ ನಿಂತು ಎಂಟು ದಿಕ್ಕನ್ನು ಮಂತ್ರ ಶಕ್ತಿಯಿಂದ ಬಂಧಿಸಲಾಗಿತ್ತು. ಇವರು ಬಗೆ ಬಗೆಯಾಗಿ ಜನರಿಗೆ ಕಷ್ಟ ನೀಡಿದರು. ಇದರಿಂದ ಕೋಪಗೊಂಡ ಬೊಮ್ಮಯ್ಯ 'ಗರದಿಂ'ದ (ಭೂತ, ಪ್ರೇತ ಪಿಶಾಚಿಗಳಿಂದಲೆ) ಜೋಗೆಯರ ಕೊಂದನು. ಇದರಿಂದ ಬೊಮ್ಮಯ್ಯನ ಜ್ಞಾನದ ಅರಿವಾದ ಅರಸ ಜೋಗಿಯರಿಗೆ ಪ್ರಾಣ ನೀಡಲು ಪರಿಪರಿಯಾಗಿ ಬೇಡಿದ. ಆಗ ಬೊಮ್ಮಯ್ಯ ಕಲ್ಲೇಶನನ್ನು 'ಎಳಲೋ, ಜಡ ಕಲ್ಲಮ ಕೃಪೆಯಿಂದ 'ಸಂಜೀವನ' ಶಬ್ದಾಮೃತವು ಕಿವಿಯೆಲ್ಲ ತುಂಬಿಲಿ, ಎಂದು ಬೇಡಲು ಸತ್ತ ಜೋಗಿಯರು ಮತ್ತೆ ಪ್ರಾಣ ಪಡೆದರು. ಎಲ್ಲರೂ ತಮ್ಮ ತಪ್ಪರಿತು ಶರಣನಿಗೆ ಕೈಮುಗಿದು 'ಜಯ ಜಯ ಪಾಹಿಮಾಃ' ಎಂದು ಆತನ ಪವಾಡವನ್ನು ಹೊಗಳಿದರು.

ಹೀಗೆ ಕವಿ ಇಲ್ಲಿ ಒಂದು ದುಷ್ಟ ಶಕ್ತಿಯ ವಿರುದ್ಧ ಹೇಗೆ ಬೊಮ್ಮಯ್ಯ ಸಮರ್ಥವಾಗಿ ಕಾದಾಡುತ್ತಾನೆಂಬುದನ್ನು ತಿಳಿಸುತ್ತ, ಆತನು ಅಗಾಧ ಶಕ್ತಿ ಹೊಂದಿದ್ದ, ಅಸಾಧಾರಣ ವ್ಯಕ್ತಿತ್ವವುಳ್ಳ ವ್ಯಕ್ತಿ ಎಂದು ಚಿತ್ರಿಸಿದ್ದಾನೆ. ಪವಾಡಗಳನ್ನು ಮೆರೆದ ಬೊಮ್ಮಯ್ಯ ಇಲ್ಲಿ 'ಬೊಮ್ಮಿದೇವ'ನಾಗಿದ್ದಾನೆ. ಹೀಗೆಯೇ ಸಾಧಾರಣ ವ್ಯಕ್ತಿಯನ್ನು ದೇವನಾಗಿಸುವ ಕ್ರಿಯೆ ನಮ್ಮ ಕಾವ್ಯಗಳಲ್ಲೆಲ್ಲ ನಡೆದು ಬಂದಿದೆ.

ಇನ್ನೂ ಬಸವಣ್ಣನವರ ಜನನ, ಉಪನಯನ, ಕಪ್ಪಡಿಗೆ ಬಂದದ್ದು, ಸಂಗಮೇಶನ ನಾಲಿಗೆಯಿಂದ ಲಿಂಗ ಪಡೆದದ್ದು, ಮದುವೆ, ಕಲ್ಯಾಣದಿಂದ ನಿರ್ಗಮನ, ಕೇತಕಿ ಪವಾಡದಂಥ ಪವಾಡ ಇತ್ಯಾದಿ ಪವಾಡಗಳು ಈ ಕಾವ್ಯದಲ್ಲಿ ಉಲ್ಲೇಖಗೊಂಡಿವೆ. 

ಜನನ–ಕೈಲಾಸದಲ್ಲಿ ಹೂವುಗಳನ್ನು ಹಂಚುವಾಗ ಷಣ್ಮುಖನಿಗೆ ಕೊಡದೆ ಕೊಟ್ಟ ನೆನಲು ವೃಷಭಮುಖನು ಬಸವಣ್ಣನಾಗಿ ಜನಿಸಿದನು.

ಉಪನಯನ – ಉಪನಯವನ್ನು ಚಿಕ್ಕವನಿರುವಾಗಲೇ ತೊರೆದು ಒಬ್ಬ ಹುಡುಗನನ್ನು ಬಾವಿಯಲ್ಲಿ ನೂಕಿದಂತೆ ಮಾಡಿ; ಅವನನ್ನು ಬದುಕಿಸಿದ. ಪವಾಡಗಳನ್ನು ಮೆರೆದ ಬಸವಣ್ಣನು ಸಂಗಮನಾಥನ ಆದೇಶದ ಮೇರೆಗೆ ಕಲ್ಯಾಣಕ್ಕೆ ಬಂದು ಹಲವಾರು ಪವಾಡಗಳನ್ನು ಮೆರೆದನು. ಹೀಗೆ ಕಾವ್ಯಗಳಲ್ಲಿ ಪವಾಡ ಭರಿತವಾಗಿ ನಾಯಕರ ನಿಜ ಚರಿತ್ರೆ ಕುಂದು ಬಂದಿದೆ.

ಹರಳಯ್ಯ ಮಧುವರಸರ ಜೀವನದಲ್ಲಿ ನಡೆವ ಕೆಲವು ಘಟನೆಗಳು ಪವಾಡಗಳಾಗಿ ವೈಭವಯುತವಾಗಿವೆ. ಚಮ್ಮಾವುಗೆ ಕೆಲಸದವನಾದ ಹರಳಯ್ಯ ಬಸವನ ಒಂದು 'ಶರಣು' ಭಾರವಾಯ್ತೆಂದು ತನ್ನ ಬಲದ, ಪತ್ನಿಯ ಎಡತೊಡೆಯ ಚರ್ಮದಿಂದ ಪಾದುಕಿಗಳನ್ನು ಮಾಡಿದರು. ಆ ಪಾದುಕೆಗಳನ್ನು ತಲೆಮೇಲೆ

ಹೊತ್ತು ಬಸವನಿಗೆ ಒಪ್ಪಿಸಲು ಹೋಗಲು, ಬಸವಣ್ಣನು ಪಾದುಕೆಗೆ ಕೈಮುಗಿದು, ನಿಮ್ಮ ಮನೆಯೊಯ್ಯಿರಿ ಎಂದನು.

ದಾರಿಯಲ್ಲಿ ಬಿಜ್ಜಳನ ಕರಣಿಕ ಮಧುವರಸ ಮದದಿಂದ ಬೇಡವೆಂದರೂ, ಕೇಳದೆ ಪಾದುಕೆಗಳನ್ನು ಮೆಟ್ಟಿ, ಮೈಯೆಲ್ಲ ಉರಿದು, ಕುಷ್ಠ ಆವರಿಸಿತು. ಹೀಗೆ ಒಂದು ದಿನ ಮಾದರಸನ ಸ್ನಾನಕ್ಕೆಂದು ನೀರು ತರಲು ಹೋದ ಮಾದೇವಿ ಸಂಜೆಯಾದುದಕ್ಕೆ ಬಾವಿಗೆ ಹೋಗಲು ಅಂಜಿ ಹರಳಯ್ಯನ ಬಚ್ಚಲ ನೀರನ್ನೆ ತಂದಳು. ಆ ನೀರು ಮಧುವರಸನ ಮೈಸೋಂಕಲು ಆತನ ರೋಗವೆಲ್ಲ ಮಾಯವಾಯ್ತು. ಹೀಗೆ ಹರಳಯ್ಯನ ಭಕ್ತಿಯ ಪರಾಕಾಷ್ಠತೆಯನ್ನು ಅರುಹಲು 'ಚೆಮ್ಮಾವುಗೆಯ ಪವಾಡ'ವನ್ನು ಹೇಳುತ್ತಾನೆ. ವಾಸ್ತವದಲ್ಲಿ ನೋಡಿದರೆ ಚೆಮ್ಮಾವುಗೆಯು ನೆನೆದ ನೀರಲ್ಲಿ ಔಷಧೀಯ ಗುಣವಿದೆ. ಇದರಿಂದ ಅವನ ರೋಗ ವಾಸಿಯಾಯ್ತು. ಕವಿ ಹರಳಯ್ಯನ ಮಹಿಮೆಯನ್ನು ಸಾರುವುದಕ್ಕಾಗಿ ಚೆಮ್ಮಾವುಗೆಯ ಪವಾಡವನ್ನು ಹೇಳುತ್ತಾನೆ.

ಒಟ್ಟಾರೆಯಾಗಿ 'ದಿನನಿತ್ಯದ ಪರಿಚಿತ ಸಂಗತಿಗಳಿಂದ ಭಿನ್ನವಾದ ತಿಳುವಳಿಕೆಯ ಮಾನದಿಂದ ವಿವರಿಸಲಾಗದಂಥ ವಿಲಕ್ಷಣವಾದ ಅಥವಾ ಅತೀಂದ್ರಿಯ ಸಾಮರ್ಥ್ಯದ ಪರಿಣಾಮವನ್ನೆ ಪವಾಡ ಎನ್ನಲಾಗುವುದು.[೮]

ಹೀಗೆ 'ವ್ಯಕ್ತಿ' ನಾಶವಾದರೂ ಆತನ ಆದರ್ಶ ಬದುಕು, ಅವರ ಜೀವನ ಮೌಲ್ಯಗಳು ಎಲ್ಲಕ್ಕಿಂತ ಹೆಚ್ಚಾಗಿ ವೈಭವೀಕೃತಗೊಂಡಿರುವ ಪವಾಡಗಳು ಜನಸಾಮಾನ್ಯರಲ್ಲಿ ಮನೆ ಮಾಡಿ ಹಚ್ಚಹಸುರಾಗಿಯೇ ಉಳಿಯುತ್ತವೆ.

**೩.೫. ಐತಿಹ್ಯಗಳು**

'ಐತಿಹ್ಯ' ಎಂಬುದು ವಾಸ್ತವದಲ್ಲಿ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಕಥೆಯೇ 'ಐತಿಹ್ಯ'ವೆನಿಸಿಕೊಳ್ಳುತ್ತದೆ. ಮೊಲ್ಲೆಬೊಮ್ಮಯ್ಯ ಬಿಜ್ಜಳ ಇವರೆಲ್ಲ ಚಾರಿತ್ರಿಕ ವ್ಯಕ್ತಿಗಳೇ, ಇಂಥವರ ಸುತ್ತ ಕಟ್ಟಲ್ಪಟ್ಟ ಕಥೆಗಳು, ಅದ್ಭುತವಾದ ಸನ್ನಿವೇಶಗಳು, ತಲೆಮಾರಿನಿಂದ ತಲೆಮಾರಿಗೆ ಭಿನ್ನತೆಯನ್ನು ಪಡೆಯುತ್ತಾ ಸಾಗುತ್ತವೆ. ಹಿಂದಿನ ಕಾಲದಲ್ಲಿ ಅಜ್ಜಿಯಂದಿರು ಕಥೆ ಹೇಳುವ ಕ್ರಮವೇ ಬೇರೆ ಇತ್ತು. ಅಜ್ಜಿ ಹೇಳುವ 'ಒಂದಾನೊಂದು ಕಾಲದಲ್ಲಿ ಒಬ್ಬ ರಾಜ ಇದ್ದ' ಎಂದು ಪ್ರಾರಂಭವಾಗುವ ಕಥೆ ಮಕ್ಕಳ ಮನಸ್ಸನ್ನು ಸೂರೆಗೊಳಿಸುತ್ತಿದ್ದವು. ಅಚ್ಚರಿಯ ಅದ್ಭುತ ಕಥೆಗಳು, ಸಾಹಸದ ಕಥೆಗಳು ಜನರಲ್ಲಿ ಧೈರ್ಯವನ್ನು ತುಂಬುತ್ತಿದ್ದವು. ಆದರೆ ಇಂದು 'ಈ ವಯಸ್ಸಿನಲ್ಲಿ ಹುಡುಗರ ಶೋಕಿ' ಎಂತಲೋ, 'ಅವಲ ಆ ನೋಟ' ಎಂತಲೋ ಪ್ರಾರಂಭವಾಗುವ ಕಥೆಗಳಿಂದ ಕಥೆಯನ್ನು ಕೇಳುವ ಆಸಕ್ತಿಯೇ ಕಳೆದು ಹೋಗಿದೆ ಎನ್ನಬಹುದು.

ಐತಿಹ್ಯವನ್ನು ಇಂಗ್ಲೀಷಿನಲ್ಲಿ 'Legend' ಎನ್ನಲಾಗುತ್ತದೆ. 'Legend' ಎಂಬುದು ಧಾರ್ಮಿಕ ರೀತಿಯ ಕಥನಕ್ಕೆ ಬಳಕೆಯಾಗುತ್ತಿತ್ತು. ಪೌರಾಣಿಕವಾದ ಅಂಶಗಳನ್ನು ಒಳಗೊಂಡಿರುವುದನ್ನೆ ಐತಿಹ್ಯಗಳೆನ್ನಬಹುದು.

ಜನಪದ ಕಥಾನಕಗಳು, ನಂಬಿಕೆಗಳು, ಪುರಾಣಗಳು, ಐತಿಹ್ಯವನ್ನು ಬಿಂಬಿಸುತ್ತವೆ. ಜನಪದ ಕಥಾನಕದಲ್ಲಿ ೧೨ನೇ ಶತಮಾನದಲ್ಲಿ ಜರುಗಿದ ಪ್ರಮುಖ ಘಟನೆ 'ಎಳಹೂಟೆ ಪ್ರಸಂಗ'ವನ್ನು ಕಾವ್ಯಗಳು ಭಿನ್ನ ಭಿನ್ನವಾಗಿ ಚಿತ್ರಿಸುತ್ತವೆ.

ಹರಳಯ್ಯ ಮಧುವರಸರ ಕಣ್ಣು ಕೀಳಿಸುವುದು, ಶೂಲಕ್ಕೇರಿಸುವ ಕಥೆ ಎಲ್ಲ ಜನಪದ ಕಥಾನಕದಲ್ಲಿ ಬರುತ್ತವೆ. ಕೆಲವು ಜನಪದ ಕಥಾನಕಗಳಲ್ಲಿ 'ಎಳಹೂಟೆಯನ್ನು' ಆನೆ ಕಾಲಿಗೆ ಕಟ್ಟಿ ಎಳೆಸಿದರೆಂದು ಹೋರಿಯ ಕಾಲಿಗೆ ಕಟ್ಟಿ ಎಳಿಸಿದರೆಂದು, ಮರಕ್ಕೆ ಕಟ್ಟಿ ಹೊಡೆಸಿದರೆಂದು ಭಿನ್ನ ಭಿನ್ನ ಅಭಿಪ್ರಾಯಗಳು ಬರುತ್ತವೆ. ಇವನ್ನು ಭಿನ್ನ ಭಿನ್ನ ಐತಿಹ್ಯಗಳಾಗಿ ಗ್ರಹಿಸಬಹುದು.

ನಮ್ಮ ಎಲ್ಲ ಪುರಾಣ ಕಾವ್ಯಗಳನ್ನು ಕುರಿತಾಗಿ ಸ್ಥಳೀಯ ಐತಿಹ್ಯಗಳು, ಹುಟ್ಟಿಕೊಂಡಿರುವುದನ್ನು ಕಾಣುತ್ತೇವೆ. ಹೀಗೆಯೇ ಮೊಲ್ಲೆಬೊಮ್ಮಯ್ಯಗಳ ಕಾವ್ಯ ಕುರಿತಾಗಿಯೂ ಸ್ಥಳಪುರಾಣ ಐತಿಹ್ಯಗಳು ದೊರೆಯುತ್ತವೆ. ಗದ್ಯದ ರಚನೆಗಳಾದ ಐತಿಹ್ಯಗಳು, ಒಂದು ಕಾಲದಲ್ಲಿ ನಡೆದು ಹೋಗಿರಬಹುದಾದ ಘಟನೆಯ ಸುತ್ತ ಹೆಣೆಯಲ್ಪಟ್ಟ ಕಟ್ಟು ಕಥೆಗಳಾಗಿವೆ. ಐತಿಹ್ಯಗಳು ಕಲ್ಪನೆಗೆ ಸಂಬಂಧಿಸಿದವು. ಕಲ್ಪನೆಯ ಜೊತೆ ಜೊತೆಗೆ ಇತಿಹಾಸದ ಐತಿಹಾಸಿಕ ಘಟನೆಗಳ ಸುಳಿವನ್ನು ಒಳಗೊಂಡಿರುತ್ತವೆ. ಹೀಗೆ ಐತಿಹ್ಯಗಳ ಕುರಿತಾಗಿ ನಮ್ಮ ಜಾನಪದ ವಿದ್ವಾಂಸರು ಸ್ಪಷ್ಟ ಚಿತ್ರಣ ನೀಡಿದ್ದಾರೆ. ಕೆನಲ್ ಮತ್ತು ಕ್ಲರ್ಕ 'ವ್ಯಕ್ತಿಗಳಿಗೆ, ಸ್ಥಳಗಳಿಗೆ ಸಂಬಂಧಿಸಿದಂತೆ ಯಾವುದೋ ನಿರ್ದಿಷ್ಟ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳೇ ಐತಿಹ್ಯಗಳು' ಎನ್ನುತ್ತಾರೆ.

ಐತಿಹ್ಯಗಳನ್ನು ಎರಡು ಬಗೆಯಾಗಿ ವಿಭಾಗಿಸಬಹುದು. ಒಂದು ಸ್ಥಳೀಯ ಐತಿಹ್ಯ ಮತ್ತೊಂದು ಸಂಚಾರಿ ಐತಿಹ್ಯ.

**ಸ್ಥಳೀಯ ಐತಿಹ್ಯ**

ಒಂದು ಸ್ಥಳಕ್ಕೆ ಸೀಮಿತ ಬಹುಪಾಲು ದುರಂತ ಐತಿಹ್ಯಗಳಾಗಿರುತ್ತವೆ. ಇದರಲ್ಲಿ ಸ್ಥಳೀಯ ಕಲ್ಲು, ಗುಡ್ಡ, ಕೊಳ, ದೇವಸ್ಥಾನ ವ್ಯಕ್ತಿ, ಘಟನೆ, ವಸ್ತು ಇತ್ಯಾದಿಗಳು ಬರುತ್ತವೆ.ಮೊಲ್ಲೆಬೊಮ್ಮಯ್ಯಗಳ ಕಾವ್ಯದ ಕುರಿತಾಗಿಯೂ ಕಲ್ಲೂರು, ರ್‍ಯಾವಣಿಕೆ, ನರೆಗಲ್ಲು, ಕೋಡಿಕೊಪ್ಪದಲ್ಲೆಲ್ಲ ಸ್ಥಳೀಯ ಐತಿಹ್ಯಗಳಿವೆ. ಕಲ್ಲೂರು, ರ್‍ಯಾವಣಿಕೆ, ನರೆಗಲ್ಲಿನಲ್ಲಿರುವ ಕಲ್ಲೇಶನ ದೇವಾಲಯಗಳು, ಸಮಾಧಿ, ಗುಹೆ, ನ್ಯಾಯದ ಕಟ್ಟೆ, ಬ್ರಹ್ಮೇಶ್ವರ ಗುಡಿ, ಖಡ್ಗ, ದೇವಾಲಯದ ಮುಂದಿನ ಬಸವಣ್ಣ, ಕಲ್ಲುಗುಂಡುಗಳು ಹೀಗೆ ಇವೆಲ್ಲ ಸ್ಥಳ ಪುರಾಣವನ್ನು ಹೇಳುವ ಐತಿಹ್ಯಗಳಾಗಿವೆ. ರ್‍ಯಾವಣಿಕೆಯ ಕಲ್ಲೇಶ ದೇವಾಲಯ, ನರೇಗಲ್ಲ ನ್ಯಾಯಕಟ್ಟೆ ಇಂದಿಗೂ ಪ್ರಚಲಿತ ಇವೆ.

ಕಲ್ಲಪ್ಪನ ಗುಡಿಯ ಕಟ್ಟೆಯ ಮೇಲಿನ ಎರಡು ಕಲ್ಲುಗಳನ್ನು ಮೊಲ್ಲೆಬೊಮ್ಮಯ್ಯ ಮತ್ತು ಜಗದೇವ ಎಂದು ಪೂಜಿಸುತ್ತಾರೆ. ರ್‍ಯಾವಣಿಕಿ ಮಠದ ಎದುರಿನ ಕಟ್ಟೆಯ ಮೇಲಿರುವ ಎರಡು ಬಸವಣ್ಣಗಳು ಕಲ್ಯಾಣ ಕ್ರಾಂತಿಯಾದಾಗ ಬಿಜ್ಜಳನನ್ನು ಕೊಂದು, ಆ ಬಸವಣ್ಣನ ಮೇಲೆ ಕುಳಿತು ತಮ್ಮ ವಿಜಯದ ಹರ್ಷವನ್ನು ಪ್ರಕಟಿಸುತ್ತ ಬಂದರೆಂದು ಸ್ಥಳೀಯರು ಹೇಳುತ್ತಾರೆ.

ಹಾಗೆ ಬರುವಾಗ ದಣಿದು ಮಾರ್ಗ ಮಧ್ಯದಲ್ಲಿ ರ್‍ಯಾವಣಿಕಿಯ ಸಮೀಪ ಕುಳಿತಿದ್ದರೆಂದೂ ಹೇಳುತ್ತಾರೆ. ರ್‍ಯಾವಣಕಿಯಿಂದ ಸ್ವಲ್ಪ ದೂರದ ಹೊಲದಲ್ಲಿ ಒಂದು ಚಿಕ್ಕ ಕಟ್ಟೆ ಇದ್ದು, ಆ ಕಟ್ಟೆಯ ಮುಂದೆ ಎರಡು ಚಿಕ್ಕ ಕಲ್ಲುಗುಂಡುಗಳಿರುವ ಸ್ಥಳವನ್ನು ಜನ ಇಂದಿಗೂ ಸೂಚಿಸುತ್ತಾರೆ. ಶ್ರಾವಣ ಮಾಸದಲ್ಲಿ, ಈ ಸ್ಥಳಕ್ಕೆ ಬಂದು 'ಬಸವಣ್ಣನನ್ನು ಕರಕೊಳ್ಳುವ ಹಬ್ಬ' ಆಚರಿಸುತ್ತಾರೆ. ಸ್ಥಳೀಯರ ಪ್ರಕಾರ ವಿಜಯೋತ್ಸವದಿಂದ ಬಂದ ಇಬ್ಬರನ್ನು ಊರ ಜನರು ಅಲ್ಲಿಗೆ ಹೋಗಿ ಕರೆದುಕೊಂಡು ಬಂದರೆಂಬ ಸಂಕೇತವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ರ್‍ಯಾವಣಿಕೆಯ ಸ್ಥಳೀಯರು ಹೇಳುವ ಪ್ರಕಾರ, ಈಗ ಇರುವ ಮಠದ ಬಲಭಾಗದಲ್ಲಿ ಒಂದು ಗುಹೆ ಇತ್ತೆಂದು,ಅಲ್ಲಿ ಬಂದು ಇವರು ಕೆಲವು ದಿನಗಳ ಬದುಕಿ, ನಂತರ ಲಿಂಗೈಕ್ಯವಾದರು ಎಂದು ಹೇಳುತ್ತಾರೆ. ಈ ಬಗೆಗೆ ಯಾವುದೇ ಕುರುಹುಗಳು ಈಗ ದೊರೆಯುವುದಿಲ್ಲ. ದೇವಸ್ಥಾನದ ಹಿಂದೆ ಒಂದು ಗದ್ದುಗೆ ಇದ್ದು, ಆ ಗದ್ದುಗೆ ಮೊಲ್ಲೆಬೊಮ್ಮಯ್ಯನದೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ.

ಹೀಗೆ ಸ್ಥಳಿಯರು ಹೇಳುವ ಕಟ್ಟು ಕಥೆಗಳೇ ಐತಿಹ್ಯಗಳಾಗುತ್ತವೆ. ಪ್ರಚಲಿತದಲ್ಲಿ ರ್‍ಯಾವಣಿಕೆಯ ಮಠದಲ್ಲಿರುವ 'ನಾಗಯ್ಯಸ್ವಾಮಿ'ಗಳು ತಮ್ಮ ಮನೆಯ ಜಗುಲಿಯ ಮೇಲೆ ಎರಡು 'ಖಡ್ಗ'ಗಳನ್ನಿಟ್ಟು ಪೂಜಿಸುತ್ತಾರೆ. ಇವು ಜಗದೇವ ಮತ್ತು ಮೊಲ್ಲೆಬೊಮ್ಮಯ್ಯರು ಬಿಜ್ಜಳನನ್ನು ಕೊಂದ 'ಖಡ್ಗ'ಗಳೆನ್ನುತ್ತಾರೆ.

**ನರೇಗಲ್ಲು**

ಸ್ಥಳೀಯರ ಅಭಿಪ್ರಾಯದಂತೆ ನರೇಗಲ್ಲಿನಲ್ಲಿ ದೇವಸ್ಥಾನದ ಬಲಭಾಗಕ್ಕೆ ಒಂದು ಕಟ್ಟೆ ಇದ್ದು, ಮೊದಲು ಅಲ್ಲಲ್ಲಿ ಒಡೆದು ಹೋಗಿದ್ದ ಕಟ್ಟೆಯನ್ನು, ಈಗ ಹೊಸ ಕಲ್ಲಿನಿಂದ ಕಟ್ಟಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಪಂಚಾಯಿತಿಯ ವ್ಯವಸ್ಥೆ ಇದ್ದುದು ನಮಗೆಲ್ಲ ತಿಳಿದಿದೆ. ಹಾಗೆಯೇ ಜನರ ಮಧ್ಯದಲ್ಲಿ ತಲೆದೋರುವ ಭಿನ್ನಾಭಿಪ್ರಾಯಗಳಿಗೆ, ಜಗಳಗಳನ್ನು ಬಗೆಹರಿಸಲು ನರೇಯಗಲ್ಲಿನ ನ್ಯಾಯದ ಕಟ್ಟೆಯಲ್ಲಿಯೇ ನ್ಯಾಯ ನಿರ್ಣಯವಾಗುತ್ತಿತ್ತೆಂದು ಹೇಳುತ್ತಾರೆ.

**ಸಂಚಾರಿ ಐತಿಹ್ಯ**

ಒಂದು ಕಡೆಯಿಂದ ಹುಟ್ಟಿ, ಮತ್ತೊಂದು ಕಡೆಗೆ ಪ್ರಚಲಿತವಿರುವ ಘಟನೆಗಳನ್ನು ಸಂಚಾರಿ ಐತಿಹ್ಯ ಎನ್ನುವರು. ಮೊಲ್ಲೆಬೊಮ್ಮಯ್ಯನ ಚಾರಿತ್ರಿಕ ಘಟನೆಗಳು ಕಲ್ಲೂರಿನಲ್ಲಿ ಹುಟ್ಟಿದರೆ, ಬಸವನ ಬಾಗೇವಾಡಿ, ಕನ್ನೆಹಳ್ಳಿ, ಆಲಮೇಲ್, ಕಲ್ಯಾಣದ ಕಡೆಯಲ್ಲೆಲ್ಲ ಈತನ ಕಥೆ ಪ್ರಚಲಿತವಿದೆ.

ಕಲ್ಯಾಣ ಪಟ್ಟಣದ ಹತ್ತಿರವಿರುವ 'ಕನ್ನೇನಹಳ್ಳಿ' ಗ್ರಾಮದ ದೇಸಾಯಿಯರು ಬಿಜ್ಜಳರಸರಿಗೆ ಆತ್ಮೀಯರಾಗಿದ್ದು, ಮುಂದೆ ಕ್ರಿ.ಶ. ೧೧೭೬ರ ವೇಳೆಗೆ ಜಗದೇವ ಹಾಗೂ 'ಮೊಲ್ಲೆಬೊಮ್ಮರ' ಶೌರ್ಯದ ಸಾಹಸವು ರಣಕಹಳೆಯಾಗಿ ಮಾರ್ಪಾಡುಗೊಂಡಿತೆಂದೂ, ಶರಣರ ಹತ್ಯೆ ಹಾಗೂ ಹಿಂಸಾಕೃತ್ಯ ನಡೆದವೆಂದು ಆ ಘಟನೆಯನ್ನು ಹೀಗೆ ವಿವರಿಸುತ್ತಾರೆ.

'ಶರಣರ ವಧೆ' ಕಂಡು ಊಟಕ್ಕೆ ಬಂದ ಮಗ 'ಜಗದೇವ' ಸ್ನೇಹಿತ 'ಮೊಲ್ಲೆಬೊಮ್ಮ'ರು ಊಟ ಕೇಳಿದಾಗ ಇವರ ತಾಯಿ ಮಣ್ಣಿನ ಮುಚ್ಚಳಿಕೆಯಲ್ಲಿ 'ರೊಟ್ಟಿ ಹಾಗೂ ನುಚ್ಚನ್ನು' ನೀಡಿ ಅಂಗಳಕ್ಕೆ

ಎಸೆಯುವಳು. ಲೋಕದಲ್ಲಿ ನಿಮ್ಮಂಥ ಮಕ್ಕಳಿದ್ದರೇನು ಫಲ? ಶರಣರ ವಧೆಯನ್ನು ಕಂಡ ನೀವು ಹೇಗೆ ಸಹಿಸಿಕೊಂಡಿರುವರೋ 'ನಾಯಿಯಂತೆ ಊಟವನ್ನು ತಿನ್ನಿ'ರಿ ಎಂದು ಹೀಯಾಳಿಸುತ್ತಾಳೆ. ನಾಯಿಯಂತೆ ಮಂಡೆವೂರಿ ಊಟ ಮಾಡಿದ, ಇವರು ಉಡದಾರವನ್ನು ಕಳಚಿ, ಬಿಜ್ಜಳನ ವಧೆಗಾಗಿ ಹೋಗುತ್ತಾರೆ. ಹಿಂತಿರುಗಿ ಬರದೇ ಇರುವ ಇವರ ಸ್ಮರಣೆಗಾಗಿಯೇ, ಇಲ್ಲಿ ದೇಸಾಯಿಯರ ಮನೆತನದಲ್ಲಿ ಇಂದಿಗೂ ಉಡದಾರವನ್ನು ಕಟ್ಟುವುದಿಲ್ಲ ಎಂಬ ಅಂಶವನ್ನು ಇಲ್ಲಿಯ ಸ್ಥಳೀಯರು, ದೇಸಾಯಿಗಳು ವಿವರಿಸುತ್ತಾರೆ.ಮೊಲ್ಲೆಬೊಮ್ಮಯ್ಯನು ಜಗದೇವನ ತಮ್ಮನೆಂದೇ ಇಲ್ಲಿಯ ಜನರು ಹೇಳುತ್ತಾರೆ.

ಕಲ್ಯಾಣ ಕ್ರಾಂತಿಯ ಪ್ರಮುಖ ಘಟನೆಗೆ ಕಾರಣನಾದ ಜಗದೇವನ ನೆನಪಿಗಾಗಿ ಇಂದಿಗೂ ದೇಶಮುಖರ ಮನೆತನದಲ್ಲಿ ತಮ್ಮ ಹಿರಿಯ ಮಗನಿಗೆ 'ಜಗದೇವ' ಎಂಬ ಹೆಸರನ್ನು ಇಡುತ್ತಾ ಬಂದಿದ್ದಾರೆ. ಇಂದಿಗೂ ಕೂಡ ಈ ಮನೆತನದವರು 'ಜಗದೇವರಾವ್ ದೇಶಮುಖ' ಎಂಬ ಹೆಸರಿನಿಂದಲೇ ಬಿಜಾಪೂರದಲ್ಲಿದ್ದಾರೆ.

ಹೀಗೆ ಸ್ಥಳೀಯ ವದಂತಿ, ಪುರಾಣ, ಕಟ್ಟುಕಥೆಗಳು ಒಂದು ಕಾಲದಲ್ಲಿ ನಡೆದು ಹೋದ ಘಟನೆಗಳನ್ನು ಆಧರಿಸಿ ಹೆಣೆಯಿಲ್ಪಟ್ಟವುಗಳಾಗಿವೆ.

### ೩.೬. ನಂಬಿಕೆಗಳು

ಹಿಂದೂಧರ್ಮದ ಅವೈಜ್ಞಾನಿಕ ಆಚರಣೆಗಳು, ಮಾನವತೆಯ ಸೆಲೆಯನ್ನೆ ಕಾಣದ ಕಂದಾಚಾರಗಳು, ಪುರೋಹಿತಶಾಹಿ, ದಬ್ಬಾಳಿಕೆ, ಜಾತಿವರ್ಗ ತಾರತಮ್ಯ, ಭವಾವಳಿಗಳ ತೊಡಕು, ಹಿಂಸಾತ್ಮಕ ಕೃತ್ಯಗಳು ಇಂಥ ಕಂದಾಚಾರಗಳನ್ನೆಲ್ಲ ಬೇರು ಸಮೇತ ಕಿತ್ತೊಗೆದು, ಸಮಾಜದಲ್ಲಿ ಸಮಾನತೆ, ಸ್ವಾತಂತ್ರ, ಹರಡಲಾಯ್ತು. ನಂಬಿಕೆ ಎಂಬುದು ಆಯಾವ್ಯಕ್ತಿಯು ನಂಬುವ, ನಂಬಿಕೆಯ ಪ್ರಮಾಣವನ್ನು ಅವಲಂಬಿಸಿದೆ. ನಂಬಿಕೆಗಳು ನಂಬುವ ಜನರನ್ನು ಎಚ್ಚರಿಸುವ, ಪ್ರೋತ್ಸಾಹಿಸುವ ಹಾಗೂ ನಿಯಂತ್ರಿಸುವ ಅಂಶಗಳನ್ನು ಒಳಗೊಂಡವು. ಹಲವು ನಂಬಿಕೆಗಳು ದಾರಿತಪ್ಪದಂತೆ ರಕ್ಷಿಸಿಕೊಂಡು ಬಂದಿವೆ. ಎಲ್ಲ ಸಂಪ್ರದಾಯಗಳ ಉಳಿವಿಗೂ ನಂಬಿಕೆಗಳೇ ಕಾರಣವಾಗಿವೆ.

ಕೆಲವು ಮೂಢನಂಬಿಕೆಗಳು ಇವೆಯಾದರೂ, ಎಲ್ಲವನ್ನು ಹಾಗೆಂದು ಭಾವಿಸುವಂತಿಲ್ಲ. ಬಹುತೇಕ ನಂಬಿಕೆಗಳು ಆತ್ಮವಿಶ್ವಾಸವನ್ನು ಮೂಢಿಸಬಲ್ಲವು. ಮತ್ತೆ ಕೆಲವು ವೈಜ್ಞಾನಿಕ ಹಿನ್ನೆಲೆಯಿಂದಲೂ, ಮಹತ್ವವಾದವುಗಳಾಗಿವೆ. ಒಂದು ಕಾಲಕ್ಕೆ ಸರ್ವವ್ಯಾಪಿಯಾಗಿದ್ದ, ಜನಪದ ವೈದ್ಯ ಇಂದಿಗೂ ಅಲ್ಲಲ್ಲಿ ಇದೆ. ಕೆಲವು ರೋಗಗಳಂತೂ ಇಂದಿಗೂ ಸಿದ್ಧಾಷಧದಿಂದಲೇ, ವಾಸಿಯಾಗುತ್ತದೆಂಬ ನಂಬಿಕೆ ಇದೆ. ಇದು ಸತ್ಯವು ಕೂಡ.

ಮಾಟ, ಮಂತ್ರ, ತಂತ್ರ, ಮೋಡಿ ಇವೆಲ್ಲ ಇಡೀ ಸಮಾಜವನ್ನೆ ಅಚ್ಚರಿ ಮೂಢಿಸಿದಂಥವುಗಳು, ಇವು ಇಡೀ ಸಮಾಜವನ್ನೆ ಭಯದಿಂದ ತಲ್ಲಣಿಸುವಂತೆ ಮಾಡಿವೆ. ಇಂದಿಗೂ ಕೂಡ ಮಾಟ, ಮಂತ್ರ, ಮೋಡಿ, ದಾರಕಟ್ಟಿಸುವುದು, ಇವು ಇದ್ದೇ ಇವೆ ಭೂತದ ಕಲ್ಪನೆಯೇ ಎಷ್ಟೊಂದು ಭಯವನ್ನು ಮೂಡಿಸುತ್ತದೆ. ಭೂತವನ್ನು ಆಹ್ವಾನಿಸುವ ವ್ಯಕ್ತಿಗೆ, ಬಡಿದಿರುವ ಭೂತವನ್ನು ಕಳಿಸಲು, ಇಂದಿಗೂ ಇಂಥ ಮಾಟ, ಮಂತ್ರಕ್ಕೆ, ಶರಣು ಹೋಗುವ ಜನರು ಇದ್ದಾರೆ.ಮಾಟ ಮಂತ್ರವನ್ನು ಮಾಡುವ ಮಂತ್ರವಾದಿಗಳು ಇದ್ದಾರೆ.

ರಾಷ್ಟ್ರದ ಮುನ್ನಡೆಯ ಸೂತ್ರ ಹಿಡಿದವರಲ್ಲಿ ಹಲವರು ಜ್ಯೋತಿಷ್ಯ, ಮಾಟ, ಮಂತ್ರ, ದೇವರು, ಭೂತ, ಎಲ್ಲವನ್ನು ನಂಬುತ್ತಾರೆ. ಹೊಸ ಕೆಲಸಕ್ಕೆ ಕೈ ಹಾಕುವ ಮೊದಲು ಜ್ಯೋತಿಷ್ಯವನ್ನು ಕೇಳುವ ಪದ್ಧತಿ ಇಂದಿಗೂ ಪ್ರಚಲಿತವಿದೆ. ಸಮಾಜದಲ್ಲಿ 'ಕಣಿಹೇಳುವ ಪದ್ಧತಿ' ಬಹುತೇಕ ಆಧುನಿಕ ಕಂಪ್ಯೂಟರೀಕೃತ ಜ್ಯೋತಿಷ್ಯದಿಂದಾಗಿ ಕಣ್ಮರೆಯಾಗಿ ಹೋಗುತ್ತಿದೆ. ಒಟ್ಟಾರೆಯಾಗಿ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳು ನಂಬಿಕೆ, ಆಚರಣೆಗಳ ಮೂಲಕ ಸಮಾಜದಲ್ಲಿ ನಡೆಯುತ್ತಲೆ ಬಂದಿವೆ.

'ಅಪುತ್ರಸ್ಯ ಗತಿರ್ನಾಸ್ತಿ' ಪುತ್ರನಿಲ್ಲದ್ದರೆ ಸ್ವರ್ಗಪ್ರಾಪ್ತಿಯಿಲ್ಲ ಎಂಬ ನಂಬಿಕೆಯು ಇದೆ. ಹಾಗೆಯೇ ತಂದೆಯ ಅಂತ್ಯಕರ್ಮಕ್ಕೆ ಗಂಡುಮಗುವು ಇರಲೇಬೇಕೆಂಬ ನಂಬಿಕೆಯೂ ನಮ್ಮ ಜನರಲ್ಲಿ ಗಾಢವಾಗಿದೆ.

'ದೈವಕ್ಕೆ ಹರಕೆ ಹೊತ್ತರೆ, ಮನದ ಬಯಕೆ ಈಡೇರುತ್ತದೆ.'

ಎಂಬ ನಂಬಿಕೆ ಆವತ್ತಿಗೂ ಇತ್ತು. ಇವತ್ತಿಗೂ ಇದೆ. ನಾವು ಮನಸಿನ ಬಯಕೆಯನ್ನು ಈಡೇರಿಸಿಕೊಳ್ಳಲು ಕಂಡ ಕಂಡ ದೇವರಿಗೆ ಕೈಮುಗಿದು ಹರಕೆ ಹೊರುತ್ತಲೇ ಇದ್ದೇವೆ.

'ಧೂಮಕೇತು ಅಶುಭ ಸಂಕೇತ.'

ಮಗು ಗರ್ಭದಲ್ಲಿದ್ದಾಗ ಹಾಗೂ ಅರಸನ ಅಂತ್ಯದ ಸಂದರ್ಭದಲ್ಲಿ ಈ ಎರಡೂ ಸಂದರ್ಭದಲ್ಲೂ ಕವಿ ಆಕಾಶದಲ್ಲಿ 'ಧೂಮಕೇತು' ಕಾಣಿಸಿಕೊಳ್ಳುತ್ತದೆ ಎನ್ನುತ್ತಾನೆ. ಶಿಶು ಜನನದ ಧೂಮಕೇತು ಹಾಗೂ ಅರಸನ ಅಂತ್ಯದಲ್ಲಿ ಕಾಣುವ ಧೂಮಕೇತುಗಳು, 'ಅಶುಭ ಸಂಕೇತ'ಗಳೇ ಆಗಿವೆ. ಊರ ಒಡೆಯನಿಗೆ ಬಂದೊಗುವ ಆಪತ್ತಿನ ಸೂಚನೆಯಾಗಿ ಧೂಮಕೇತು ಕಾಣಿಸಿಕೊಳ್ಳುತ್ತದೆಂಬ ನಂಬಿಕೆ ಇದೆ. ಹೀಗಾಗಿಯೇ ಜನನದ ಧೂಮಕೇತುವಿನಿಂದ ಊರ ಒಡೆಯನಾದ ಬೊಮ್ಮಗೌಡನಿಗೆ ಕೇಡಾದರೆ, ಅಂತ್ಯದಲ್ಲಿ ಕಾಣುವ ಧೂಮಕೇತು ನಾಡಿನ ಬಿಜ್ಜಳನಿಗೆ ಕೇಡನ್ನುಂಟು ಮಾಡುತ್ತದೆ.

'ಕುಲದೈವಕ್ಕಿಂತ ಮನೆದೈವವೇ ಹೆಚ್ಚು' ಎಂಬ ನಂಬಿಕೆ ಇತ್ತು. ಇಂದಿಗೂ ಮನೆದೇವರಿಗೆ ಹೆಚ್ಚು ನಡೆದುಕೊಳ್ಳುವುದನ್ನು ಕಾಣುತ್ತೇವೆ.'ಹರಕೆ ಪೂರೈಸದಿದ್ದರೆ ದೇವರು ಶಿಕ್ಷಿಸುತ್ತಾ'ನೆಂಬ ನಂಬಿಕೆಯೂ ಇದೆ.

'ಗುರುವಾಕ್ಯ ಕೇಳದ ಶಿಷ್ಯ, ಪ್ರಿಯನ ಮಾತು ಕೇಳದ ಪತ್ನಿ, ತಂದೆ ತಾಯಿಗಳ ಮಾತು ಕೇಳದ ಮಕ್ಕಳು ನರಕಕ್ಕೆ ಹೋಗುತ್ತಾರೆಂಬ ನಂಬಿಕೆ ಇದೆ.

'ದೃಷ್ಟಿ ತೆಗೆಯುವುದು'

ದುಷ್ಟ ಕಣ್ಣುಗಳಿಂದ ಕಂಡ ಕಂಡವರೆಲ್ಲ ನೋಡುವದರಿಂದ, ಆ ದೃಷ್ಟಿ ಅಥವಾ ನೆದರು ತಾಗದಿರಲೆಂದು ದೃಷ್ಟಿ ತೆಗೆಯುವ ಪದ್ಧತಿ ಇದೆ. ದೃಷ್ಟಿ ತೆಗೆದರೆ ಯಾವ ದುಷ್ಟ ಶಕ್ತಿಗಳು ಆವರಿಸುವುದಿಲ್ಲ ಎಂಬ ನಂಬಿಕೆ ಬಲವಾಗಿ ಇದೆ. ಮಾಟ, ಮಂತ್ರ, ತಂತ್ರ, ಮೋಡಿ, ಬ್ರಹ್ಮರಾಕ್ಷಸ, ಕುಲರಾಕ್ಷಸ, ಎಲ್ಲ ಭಯ. ಹುಟ್ಟಿಸುವ ಇವು ಇದ್ದು. ಇಂಥ 'ಕಣ್ಕಟ್ಟು ವಿದ್ಯೆ' ಕೆಟ್ಟ ಕೆಲಸಗಳಗಾಗಿಯೇ, ಅಂದು ಹೆಚ್ಚು ಬಳಕೆಯಲ್ಲಿದ್ದುದು ಕಂಡು ಬರುತ್ತದೆ.ಮಾಟಗಾಗರು, ಮಂತ್ರಾವಾದಿಗಳನ್ನು ನಂಬುತ್ತಿದ್ದರು, ಹಾಗೆಯೇ ಪವಾಡಗಳನ್ನು,

ಪವಾಡ ಪುರುಷರನ್ನು ನಂಬುತ್ತಿದ್ದರು. ನಮ್ಮ ಪುರಾಣಗಳಲ್ಲಿನ ಅವತಾರದ ಕಲ್ಪನೆಯಿಂದಾಗಿ ಕೆಟ್ಟ ಕಾರ್ಯಮಾಡಿದರೆ ಪ್ರಾಣಿಗಳಾಗಿ, ನಾಯಿ, ನರಿಯಾಗಿ ಹುಟ್ಟುತ್ತಾರೆಂಬ ನಂಬಿಕೆ ಇದೆ. ಹಾಗೂ ಪ್ರಾಣಿ ಸಂಕುಲವನ್ನು ದೈವ ಪ್ರತೀಕವಾಗಿ ಪೂಜಿಸುತ್ತಾರೆ.

'ಎತ್ತು-ಬಸವಣ್ಣ', 'ಆಕಳು-ಕಲ್ಪವೃಕ್ಷ', 'ನಾಯಿ-ಮಲ್ಲಯ್ಯ', 'ಹಂದಿ-ವರಹ', 'ಇಲಿ-ಗಣೇಶನ ವಾಹನವಾಗಿ ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ಪ್ರಾಣಿ ಸಮೂಹವನ್ನು, ಪ್ರಕೃತಿಯನ್ನು ಆರಾಧಿಸುವ ಪದ್ಧತಿ ಇದೆ. ಪ್ರಕೃತಿಯಲ್ಲಿನ ವೈಪರಿತ್ಯಗಳಿಗೆಲ್ಲ ದೈವವೇ ಕಾರಣ ಎಂಬ ನಂಬಿಕೆ ಇದೆ.

'ಅರಸು ಮುನಿದರೆ ರಾಜ್ಯದಲ್ಲಿರಬಾರದು, ಗಂಡ ಮುನಿದರೆ ಹೆಂಡತಿ ಇರಬಾರದು' ಎಂದು ಅಛಲವಾದ ನಂಬಿಕೆ ಇವರಲ್ಲಿತ್ತು. ಹಾಗಾಗೀಯೇ ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ತೆರಳುವ ಯೋಚನೆ ಮಾಡಿದರು.ನಂಬಿಕೆಗಳು ಜನಪದ ಜೀವನ ವೈಜ್ಞಾನಿಕ ಸಿದ್ಧಾಂತಗಳು ಕೂಡ ಆಗಿವೆ.

'ಚೆಮ್ಮಾವುಗೆಯ ನೀರು' ರೋಗನಿರೋಧಕ ಶಕ್ತಿಯನ್ನು ಪಡೆದಿದೆ. ಇದಕ್ಕೆ 'ಕರಿಬಾನಿ' ಎನ್ನುತ್ತಾರೆ. 'ಕರಿಬಾನಿ' ಎಂದರೆ ನೆಲದಲ್ಲಿ ಹುಗಿದ ಚರ್ಮ ಹದ ಮಾಡಲು ಬಳಸುವ ಹರಿವೆ. ಚರ್ಮದ ಕರಿ ನೀರನ್ನೆ ಔಷಧಿ ರೂಪದಲ್ಲಿ ಬಳಸುತ್ತಾರೆ. ಇದೇ ಒಂದು ನಂಬಿಕೆಯ ಮೇಲೆ ಹಾಸನದಲ್ಲಿ ಈ ಕರಿಬಾನಿಗೆ ಸಂಬಂಧಿಸಿದಂತೆ ಒಂದು ದೇವಸ್ಥಾನವನ್ನೇ ಕಟ್ಟಿದ್ದಾರೆ.

ಮೊಲ್ಲೆಬೊಮ್ಮಯ್ಯ ಜಗದೇವ ಗುಹೆಯಲ್ಲಿದ್ದು ಅಲ್ಲೆ ಲಿಂಗೈಕ್ಯವಾದರೆಂದು ಅಲ್ಲಿರುವ ಸಮಾಧಿ ಇವರದೆ ಎಂದು ಸ್ಥಳೀಯರ ನಂಬಿಕೆಯಾಗಿದೆ. ಒಟ್ಟಾರೆಯಾಗಿ ನಂಬಿಕೆಗಳಿಗೆ ಬರೆದಿಟ್ಟ ಶಾಸ್ತ್ರ ಗ್ರಂಥಗಳ, ಪುರಾಣಗಳ, ವಿಶಿಷ್ಟ ಪರಂಪರೆಗಳ ಹಂಗಿರುವದಿಲ್ಲ. ಇವು ಜನರ ವೈಯಕ್ತಿಕ ನಂಬಿಕೆಗೆ ಸಂಬಂಧಿಸಿದವುಗಳಾಗಿವೆ.

ನಂಬಿಕೆಗಳೇ ಸಂಪ್ರದಾಯದ ಸೃಷ್ಟಿಗೆ ಕಾರಣವಾಗಿವೆ. ಈ ನಂಬಿಕೆಗಳು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರುತ್ತವೆ. ಹಿಂದೂಗಳು ಮೂರ್ತಿಪೂಜೆಯಲ್ಲಿ ನಂಬಿಕೆ ಇಟ್ಟವರು. ಹೀಗೆ ಒಂದು ಸಮೂಹ ಯಾವುದನ್ನು ನಂಬುತ್ತದೋ, ಅದೇ ನಂಬಿಕೆ. ಅದು ಮಾನಸಿಕ ಒಪ್ಪಿಗೆಯನ್ನು ತೋರುವ ಪ್ರವೃತ್ತಿಯಾಗಿದೆ. ಧಾರ್ಮಿಕ ನಂಬಿಕೆಗಳು ಭಯದಿಂದ ಹುಟ್ಟಿದವು. 'ಪಾಪ ಪ್ರಜ್ಞೆ' ಮನುಷ್ಯನನ್ನು ಗಾಢವಾಗಿ ದೇವರನ್ನು ನಂಬುವಂತೆ ಮಾಡಿತು. 'ತಾವು ಮಾಡಿದ ಪಾಪ ತಮ್ಮನ್ನೇ ಕಾಡುತ್ತದೆ.' ಎಂಬ ಮಾತು ಪ್ರಚಲಿತದಲ್ಲಿದೆ. ವ್ಯಕ್ತಿಗೆ ದೇವರು ಶಿಕ್ಷೆ ನೀಡುತ್ತಾನೆಂಬ ನಂಬಿಕೆ ನಮ್ಮಲ್ಲಿದೆ.

ಭೂತದ ಆರಾಧನೆ, ದೇವತಾರಾಧನೆ, ಪಿತೃಪೂಜೆ, ಕುಲದೇವತೆಯನ್ನು ಪೂಜಿಸುವುದು ಇಂಥ ನಂಬಿಕೆಗಳೆಲ್ಲ ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುತ್ತವೆ. 'ಅತಿಮಾನುಷವಾದಶಕ್ತಿ'ಯನ್ನು ನಾವು ನಂಬುತ್ತೇವೆ ಮೊಲ್ಲೆಬೊಮ್ಮಯ್ಯನ ಪವಾಡಗಳಲ್ಲಿಯೂ ಇಂಥದೆ ಅತಿಮಾನುಷವಾದ ವ್ಯಕ್ತಿತ್ವವನ್ನು ಕಾಣುತ್ತೇವೆ. ಹೀಗೆ ನಂಬಿಕೆ, ಆಚರಣೆಗಳು ಒಂದು ಸಮಾಜದ ಸಾಂಸ್ಕೃತಿಕ ಬದುಕಿನ ಪ್ರತಿಬಿಂಬಗಳಾಗಿ ಹೊರಹೊಮ್ಮುತ್ತವೆ.

**ಸಂಪ್ರದಾಯ ಆಚರಣೆ**

ಸಂಪ್ರದಾಯ, ನಂಬಿಕೆ, ಆಚರಣೆಗಳು ಜನಪದರ ಭಾವನಾ ಬದುಕಿನೊಂದಿಗೆ ಬೆಸೆದುಕೊಂಡು ಬಂದಿವೆ. ಸಮಾಜವೊಂದರ ಮನಃಸ್ಥಿತಿಯನ್ನು ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುತ್ತದೆ

'ಬೊಯಸ್' ಎಂಬ ಜಾನಪದ ತಜ್ಞರು ಹೀಗೆ ಹೇಳುತ್ತಾರೆ. 'folklogre is not a science about a folk but the traditional folk science and folk Poetry' ಎಂದಿದ್ದಾರೆ.

ಸಂಪ್ರಾದಾಯಗಳಿಲ್ಲದ ಸಮಾಜವನ್ನು ಕಲ್ಪಿಸಲು ಸಾಧ್ಯವಿಲ್ಲ. ಹಾಗೆಯೇ ಸಂಸ್ಕೃತಿಯನ್ನು ಕೂಡ ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆಚರಣೆ, ಸಂಪ್ರದಾಯಗಳು ಮನುಷ್ಯನ ಬದುಕಿನ ಉದ್ದಕ್ಕೂ ಹರಡಿಕೊಂಡಿವೆ. ಒಂದು ಗುಂಪು ಪರಂಪರಾಗತವಾಗಿ ಒಪ್ಪಿಕೊಂಡಿರುವ, ಆಚರಿಸುತ್ತಿರುವ ಆಚಾರ, ವಿಚಾರ, ನಡೆ, ನುಡಿಗಳೆಲ್ಲವನ್ನು ಮುಂದಿನ ಪೀಳಿಗೆ ಚಾಚುತಪ್ಪದೇ, ಆಚರಿಸುತ್ತಾ ಸಾಗುತ್ತದೆ. ಹೀಗೆ ಆಚರಿಸುವಾಗ ಉಂಟಾಗುವಂಥ ಸಾಂಸ್ಕೃತಿಕ ಮೌಲ್ಯಗಳ ಮೊತ್ತವೇ ಸಂಪ್ರದಾಯ, ಆಚರಣೆ ಆಗುತ್ತದೆ. ಸಮಾಜವನ್ನು ಹಿಡಿತದಲ್ಲಿಟ್ಟುಕೊಳ್ಳುವಲ್ಲಿಯೂ, ಈ ಸಂಪ್ರದಾಯ, ಆಚರಣೆಗಳು ಸಹಕಾರಿಯಾಗುತ್ತವೆ. ಮನುಷ್ಯನ ಬದುಕಿನಲ್ಲಿ ನೀತಿ, ನಿಯಮಗಳನ್ನು, ಕಟ್ಟಳೆಗಳನ್ನು, ಸಂಯಮವನ್ನು, ಒಂದು ನಿಯಮಿತವಾದ ಚೌಕಟ್ಟನ್ನು ಒದಗಿಸುತ್ತದೆ.

ಉದಾ:- 'ಮುಸ್ಲಿಂರ, ಪರದಾ ಪದ್ಧತಿಯನ್ನು ಉದಾಹರಿಸಬಹುದು.

ಸಂಪ್ರದಾಯಗಳ ಆಚರಣೆಯಲ್ಲಿ ನಾವು ಪ್ರಾದೇಶಿಕ ಭಿನ್ನತೆಯನ್ನು ಕಾಣುತ್ತೇವೆ. ಕಲ್ಲೂರಿನ ಕಲ್ಲೇಶನ ಅನುಗ್ರಹಕ್ಕಾಗಿ ಕಲ್ಲಮ್ಮ ಮತ್ತು ಬೊಮ್ಮಗೌಡ ಹೋಗುತ್ತಾರೆ. ಅಲಂಕೃತಗೊಂಡ ಕಲ್ಲೇಶನ ಎದುರು ಕಾಣಿಕೆಯನ್ನಿತ್ತು, ಸತಿಪತಿಗಳು ತಮಗೆ ಸುತನನ್ನು ಕರುಣಿಸೆಂದು ಬೇಡಿಕೊಳ್ಳುತ್ತಾರೆ. ಕಲ್ಲಮ್ಮ ತಮಗೆ ಮಗನನ್ನು ಕೊಟ್ಟರೆ, ನಿನ್ನ ಹೆಸರಿಡುವೆನೆಂದು ಬೇಡಿಕೊಳ್ಳುತ್ತಾಳೆ.ಮನುಷ್ಯ ತನ್ನ ಮನಸಿನ ಆಸೆಯನ್ನು ಈಡೇರಿಸಿಕೊಳ್ಳುವ ಸಲುವಾಗಿ ಕಂಡ ಕಂಡ ದೇವರಿಗೆ ಇಂದಿಗೂ 'ನಿನ್ನ ಹೆಸರಿಡುವುದಾಗಿ, ನೂರು ಕಾಯಿಗಳನ್ನು ಒಡೆಸುವುದಾಗಿ, ದೀಡು ನಮಸ್ಕಾರ ಹಾಕುವುದಾಗಿ, ತುಪ್ಪದ ದೀಪ ಹಚ್ಚುವುದಾಗಿ' ಹೀಗೆ ಹಲವು ಬಗೆಯ ಹರಕೆ ಹೊರುವುದು ಸಂಪ್ರದಾಯವಾಗಿ ಬಿಟ್ಟಿದೆ.

ಮನೆದೈವ, ಕುಲದೈವ, ಆರಾಧ್ಯದೈವ, ಪರದೈವವೆಂದು ಕೈಮುಗಿದು ಹರಿಸಿಕೊಳ್ಳುವುದು ಸಹಜ. 'ಹರಕೆ' ನಮ್ಮ ಸಂಸ್ಕೃತಿಯ ಪ್ರತೀಕವಾಗಿದೆ. ಗರ್ಭಧರಸಿದಾಗ ಆಗುವ ದೇಹದ ಬದಲಾವಣೆಗಳು, ಆಗ ಆಚರಿಸುವ ಪ್ರತಿಯೊಂದು ಆಚರಣೆಗಳು ಕಳ್ಳಕುಬಸ, ದೊಡ್ಡಕುಬಸ. ಮಾಡುವದರ ಹಿಂದೆ ಮಗುವಿನ ದೈಹಿಕ ಬೆಳವಣಿಗೆಗೆ ಎಲ್ಲರೀತಿಯ ಪೋಷಕಾಂಶಗಳ ಅಗತ್ಯವಿದೆ. ಹಾಗಾಗಿಯೇ ಊರಮಂದಿಯೆಲ್ಲರೂ 'ಕುಬಸ' ಮಾಡುತ್ತಾರೆ. ಗರ್ಭಿಣಿ ಸ್ತ್ರೀಯನ್ನು ಮನೆಗೆ ಕರೆದು ವಿವಿಧ ಬಗೆಯ ಅಡುಗೆ ಮಾಡಿಸಿ, ಊಟಮಾಡಿಸುತ್ತಾರೆ. ಇದರಿಂದ ಗರ್ಭಿಣಿಯ ಬಯಕೆಯನ್ನು ತೀರಿಸುತ್ತಾರೆ.

ಹಾಗೇ ದಿನಕಳೆದಂತೆ ನವಮಾಸಗಳು ತುಂಬಿ ಪೂರ್ಣರೂಪ ಪಡೆದ ಮಗು ಸಡಗರದಿಂದ ಹೊರಬರಲು ತವಕಿಸುತ್ತಿದ್ದು. ಆಗ ದಿನವು ತುಂಬಿ ಪ್ರಸವ ಬೇನೆ ಪ್ರಾರಂಭವಾಯಿತು. ತರುಣಿಯರೆಲ್ಲ ಬಂದು

ಗರ್ಭಿಣಿಯ ಬೆನ್ನನ್ನು ಹಿಡಿದು ಪ್ರಸವವಾಗಲು ಧೈರ್ಯತುಂಬಿದರು. ಕಲ್ಲಮ್ಮ ಹೊನ್ನನ್ನೇ ಎರಕಹೊಯ್ದ ಪುತ್ಥಳಿಯಂಥ ಕುಮಾರನಿಗೆ ಜನನ ನೀಡಿದಳು. ಜನಿಸಿದ ಮಗುವನ್ನು ಬೆಚ್ಚನೆಯ ನೀರನ್ನು ಕಾಸಿ, ಬಂಗಾರದ ಹರಿವಾಣದಲ್ಲಿಟ್ಟು ಹೊಕ್ಕಳನ್ನು ಕೊಯ್ದರು. ಮತ್ತೆ ಮಿರುಗುವ ರತ್ನದ ಆರತಿಯನ್ನು ನಿವಾಳಿಸಿ ಆರತಿಯನ್ನು ಮಾಡಿದರು.

ಈ ಎಲ್ಲ ಆಚರಣೆಗಳು ಪ್ರಸ್ತುತದಲ್ಲೂ ಇದ್ದು, ಮಗು ಜನಿಸಿದಾಗ ಆಚರಿಸುವ ಮುಖ್ಯ ಸಂಪ್ರದಾಯಗಳಾಗಿವೆ. ಪ್ರಸವದ ನೋವಿನಿಂದ ಸೋತು ಹೋದ ಕಲ್ಲಮ್ಮಳನ್ನು ನೀರನ್ನು ಹಾಕಿ ಉಪಚರಿಸಿದಾಗ ಕಣ್ದೆರೆದಳು. ಎಳೆಯ ಚಂದ್ರನಂತೆ, ನವರತ್ನದ ಕಿರಣದಂತೆ, ಕುಶಲತೆಯಿಂದ ನಿರ್ಮಿಸಿದ ಪಡಿಯಚ್ಚಿನಂತೆ ಹೊನ್ನಿನ ಪಾತ್ರೆಯಲ್ಲಿ ಮಿನುಗುತ್ತಿದ್ದ ಮಗುವನ್ನು ಕಂಡಳು. ಬಳಿಕ ನಾರಿಯರು ಕಲ್ಲಮ್ಮಳನ್ನು ಜಳಕ ಮಾಡಿಸಿ, ಬಟ್ಟೆಕೊಟ್ಟು ಬಾಣಂತಿ ಗೃಹಕ್ಕೆ ಹಾಕಿದರು. ಪ್ರಭುಕುಲದ ತಿಲಕದಂತಿದ್ದ ಬೊಮ್ಮಗೌಡನಿಗೆ ಪುತ್ರ ಜನಿಸಿದುದನ್ನು ತಿಳಿಸಿದರು ಅತ್ಯುತ್ಸಾಹದಿಂದ ಬೊಮ್ಮಗೌಡ ಎಲ್ಲ ಜನರಿಗೆ ಮಗು ಜನಿಸಿದ ಹರ್ಷಕ್ಕಾಗಿ ದಾನ, ಧರ್ಮ ಊಟ ಹಾಕಿಸುವದು, ಸಿಹಿ ಹಂಚುವ ಕೆಲಸ ಮಾಡುತ್ತಾನೆ. ಬೇಡಿ ಬೇಡಿದುದನೆಲ್ಲ ನೀಡಿದನು. ನಂತರದಲ್ಲಿ ಪುರಾಣ, ಪುಣ್ಯಕಥೆಗಳನ್ನು ಓದುವ ವಿದ್ವಾಂಸನನ್ನು ಕರೆಯಿಸಿ, ಬಾಲಕನಿಗೆ ಜಾತಕ ಕರ್ಮವನ್ನು ಕೈಗೊಂಡು, ಲಿಂಗಧಾರಣೆ ಮಾಡಿಸುವ ಕಾರ್ಯ ನಡೆಯಿತು.ಮಗು ಜನಿಸಿದ ಹನ್ನೆರಡನೆಯ ದಿನಕ್ಕೆ 'ನಾಮಕರಣ' ಮಾಡಿಸಲು ಅತೀ ಉತ್ಸಾಹದಿಂದ ಬಟ್ಟೆ ತಂದು ಬಂಧು ಬಾಂಧವರಿಗೆಲ್ಲ ಹಂಚಿ, ಹೋಮವನ್ನು ಮಾಡಿ 'ಬೊಮ್ಮಣ್ಣ'ನೆಂಬ ಹೆಸರನ್ನಿಟ್ಟನು.ಈಗಲೂ ಕೂಡ ಗಂಡು ಮಗು ಜನಿಸಿದ 'ಹನ್ನೆರಡನೆಯ ದಿನಕ್ಕೆ' ಗಂಡುಮಗುವಿನ ನಾಮಕರಣವನ್ನು, ಪುರೋಹಿತರ, ಗುರುಗಳನ್ನೋ, ಸ್ವಾಮಿಯನ್ನೊ ಕರೆಯಿಸಿ ಇಡಿಸುವ ಪದ್ಧತಿ ಇದೆ. ಹೀಗಾಗಿಯೇ ಅಂದಿನ ಈ ಸಂಪ್ರದಾಯ ಇಂದಿಗೂ ಪ್ರಚಲಿತವಿದೆ.

ಬೊಮ್ಮಗೌಡ ಇಟ್ಟ ಹೆಸರನ್ನು ಕೇಳಿ ಕಲ್ಲಮ್ಮ ಭಯಪಡುತ್ತಾಳೆ. ಏಕೆಂದರೆ ಕಲ್ಲೂರಿನ ಕಲ್ಲೇಶನಿಗೆ ತಾನು ಹರಕೆ ಹೊತ್ತಿದ್ದು. ಅವನ ಅನುಗ್ರಹದಿಂದಲೇ ಮಗು ಜನಿಸಿದ್ದನ್ನು ಹೇಳುತ್ತಾಳೆ. ಆದರೆ ಬೊಮ್ಮಗೌಡ 'ಪುರುಷರು ಕರೆದ ಹೆಸರನ್ನು ಉಲ್ಲಂಘಿಸುವ ಸ್ತ್ರೀಯರುಂಟೆ'? ನಾವು ಕರೆದ ನಾಮವು ಹಿರಿದಾಗಿದೆ ನಿನಗೆ, ನನಗೆ, ನಮ್ಮೆಲ್ಲರಿಗೂ ಯಶಸ್ಸನ್ನು ಕೊಡುವವ ನಮ್ಮ ಮನೆದೈವ: ಹಾಗಾಗಿ ಆತನ ಹೆಸರಿಟ್ಟಿರುವೆ ಎನ್ನುತ್ತಾನೆ ಅದಕ್ಕವಳು ಒಪ್ಪುತ್ತಾಳೆ. ಹೀಗೆ ಪುರುಷ ಪ್ರಧಾನವಾದ ಸಮಾಜ ನಮ್ಮದು, ಪುರುಷನ ಆಜ್ಞೆ ಮೀರಲು ಸ್ತ್ರೀಗೆ ಅವಕಾಶವಿರಲಿಲ್ಲ. ಹರಕೆ ಹೊತ್ತ ದೇವರಿಗೆ ಹರಕೆ ಪೂರೈಸದಿದ್ದರೆ ಕೋಪ ಬರುತ್ತದೆಂಬ ನಂಬಿಕೆ ಪ್ರಚಲಿತದಲ್ಲಿತ್ತು.

ಸೂಲಗಿತ್ತಿಯರಿಗೆ ಜಳಕವನ್ನು ಮಾಡಿಸಿ, ಹೂವನ್ನು, ಚಂದನ, ಅಕ್ಷತೆಯನ್ನು ಸುವಾಸಿನಿಯರಿಗೆ ನೀಡಿ 'ಬಾಗಿನ'ವನ್ನು ಕೊಟ್ಟರು. ಹೊಸ ಚಿಗುರಿನ ತೋರಣವನ್ನು ಕಟ್ಟಿದರು. ವಿವಿಧ ಬಗೆಯ ಧನ ಧಾನ್ಯಗಳನ್ನು ಕೊಟ್ಟರು.ಹೀಗೆ ನಾಮಕರಣದ ದಿನ ಬಾಣಂತನ ಅಥವಾ ಪ್ರಸವ ಮಾಡಿಸಿದ ಸ್ತ್ರೀಯರಿಗೆ 'ಬಾಗಿನ'ವನ್ನು ಕೊಡುವ ಪದ್ಧತಿ ಇಂದಿಗೂ ಇದೆ. ಬಾಗಿನವನ್ನು ಗ್ರಾಮೀಣರು 'ಹಿಟ್ಟಕ್ಕಿ'ಯನ್ನು ಕೊಡುವುದು ಎನ್ನುತ್ತಾರೆ.

ಬಾಣಂತಿಯು ಹೊಸಕಳೆಯಿಂದ ಕಂಗೊಳಿಸುತ್ತಿದ್ದಳು. ಪ್ರಸವದ ನಂತರದಲ್ಲಿ ಬಾಣಂತಿಯ ಮೈ ಯಾವ ರೀತಿ ಸೂಕ್ಷ್ಮವಾಗುತ್ತದೆ ಎಂಬುದನ್ನು ಇಲ್ಲಿ ಹೇಳಿದ್ದಾರೆ. ತೆಳುವಾದ ಗಲ್ಲ, ರಾರಾಜಿಸುವ ಹಣೆಯ ಕುಂಕುಮ, ಕಾಡಿಗೆಯಿಂದ ಥಳಥಳಿಸುವ ಕಣ್ಣುಳು, ದಾಳಿಂಬೆಯಂಥ ಹಲ್ಲುಗಳಿಂದ ಬಾಣಂತಿ ರಾರಾಜಿಸಿದಳು.ಇಲ್ಲಿ ವರ್ಣನೆಗೊಡಿರುವ ಪೂಜಾವಿಧಾನವು ಸಂಸ್ಕೃತಿಯ ಪ್ರತೀಕವಾಗಿದೆ. ಉದಯಲ್ಲೆದ್ದು, ಹೂದೋಟಕ್ಕೆ ಹೋಗಿ, ಪರಿಮಳಯುಕ್ತವಾದ ಮಲ್ಲಿಗೆಯ ಹೂವಗಳನ್ನು ಕಲ್ಲಿನಾಥನಿಗೆ ಅರ್ಪಿಸುವುದು. ಧೂಪ, ದೀಪ, ಪತ್ರೆ, ನೈವೆದ್ಯೆ, ತಾಂಬೂಲವನ್ನು ಅರ್ಪಿಸಿ, ಭಕ್ತಿಯಿಂದ ಪೂಜಿಸುತ್ತಿದ್ದರು. ಭಕ್ತಿಯ ಪೂಜಾಕ್ರಮವು ಕೂಡ ಒಂದು ಸಾಂಪ್ರದಾಯದ ಮುಂದುವರಿಕೆಯೇ ಆಗಿದೆ.

ಹೊನ್ನ ಕಳಸ, ಕನ್ನಡಿ, ತೋರಣ, ನವರತ್ನದ ಚಾಮರ ಎಲ್ಲವೂ ಸಾಂಸ್ಕೃತಿಕ ಪ್ರತೀಕಗಳಾಗಿವೆ. ಧಾರ್ಮಿಕ ಪೂಜಾ ವಿಧಾನಗಳು, ಅವರ ಧಾರ್ಮಿಕ ಸ್ಥಿತಿಯನ್ನು ಬಿತ್ತರಿಸುತ್ತವೆ. 'ಹೆಣ್ಣುಕೇಳುವ ಪದ್ಧತಿ' ಈಗಲೂ ಇವೆ. ಹಾಗೆಯೇ 'ಹೆಣ್ಣುನೋಡುವ ಶಾಸ್ತ್ರವೂ' ಇದ್ದು, ಮೊಲ್ಲೆಬೊಮ್ಮಯ್ಯ ಕಾಮರಾಜನ ಮಕ್ಕಳನ್ನು ನೋಡುತ್ತಾನೆ. ಅವರಲ್ಲಿ ಹಿರಿಯವಳಾದ ಪಂಪಾಂಬೆಯನ್ನು ಆರಿಸುತ್ತಾನೆ. ಈ ಶಾಸ್ತ್ರ ಇಂದಿಗೂ ಇದೆ. ಒಂದು ಒಳ್ಳೆಯ ಮೂಹೂರ್ತದಲ್ಲಿ ವಿವಾಹವನ್ನು ನಿಶ್ಚೈಸುವುದು 'ನಿಶ್ಚಯಕಾರ್ಯ' ಅತೀ ಸಂಭ್ರಮ ಸಡಗರದಿಂದ ನೆರವೇರಿಸುವದು. ಇತ್ಯಾದಿ ಸಂಪ್ರಾದಾಯಗಳ ಬಗ್ಗೆ ವಿವರಿಸಲಾಗಿದೆ.

ಹೊನ್ನ ಕಾಂತಿಯಿಂದ ಥಳಥಳಿಸುವ ಕಲಶ, ಕನ್ನಡಿ, ತೋರಣಗಳಿಂದ ಮೆರೆವ ಮಾಂಗಲ್ಯ ಮಂಟಪ, ಸಂಪ್ರದಾಯದ ಗುರುತಾಗಿವೆ. 'ರಸಪಾಕದ ಅನ್ನವನ್ನು' ಉಣಬಡಿಸಿ, ತಾಂಬೂಲವನ್ನು ಕೊಟ್ಟು ಕೈಮುಗಿದು ನಿಮ್ಮ ಸುತನ ಕೃಪೆಗೆ ಬನ್ನಿ ಎನ್ನುತ್ತಾನೆ. ಈ ನಮ್ಮ ಸಮಾಜದಲ್ಲಿ ಸಂಪ್ರಾದಾಯದ ಮುಂದುವರಿಕೆಯಾಗಿ ನಡೆಯುತ್ತಿವೆ. ವಿವಾಹದ ಪ್ರಸಂಗದಲ್ಲಿರುವ ಉತ್ಸಾಹ ಇಂದಿಗೂ ಇದೆ. ಉದಯದಲಿ ಎದ್ದು ಕಲ್ಲೇಶನಿಗೆ ನಮಸ್ಕರಿಸಿ, ಮದುವೆಗೆ ಬರುವವರ ಪಯಣವೆಲ್ಲ ಅಧಿಕ ಸಂಭ್ರಮದಿಂದ ನೆರವೇರಲಿ ಎನ್ನುತ್ತಾನೆ. ಒಡೆಯರು, ಭಕ್ತರು, ಪರಿಜನರು ಲಾಸ್ಯಗಾನದವರು, ನಾನಾವಾದ್ಯ ರಭಸದಿಂದ, ನುಡಿಯುವ ಕಹಳೆಯನ್ನು ಉದುವವರು. ಹಾಗೆಯೇ ಸ್ತ್ರೀಯರು ಅತ್ಯುತ್ಸಾಹದಿಂದ ಶೋಭನವನ್ನು ಹಾಡಿದರು.

ಇಂದಿಗೂ ಕೂಡ ಶೋಬಾನೆ ಪದಗಳನ್ನು ಶುಭಕಾರ್ಯಗಳಲ್ಲೆಲ್ಲ ಹಾಡುತ್ತಾರೆ. ಪುರದ ಜನರು ಆರತಿಯನ್ನು ಮಾಡಿದರು. ಹೀಗೆ ಮದುವೆಯ ಸಂಭ್ರಮವನ್ನು ವಿವರಿಸಲಾಗಿದೆ.

ಹಿಂದೂಗಳಲ್ಲಿಯ ನಂಬಿಕೆ, ಸಂಪ್ರದಾಯಗಳನ್ನು ಇಲ್ಲಿ ಕವಿ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಊರಿನ ಅಗಸೆಯ ಹೊರಗೆ ಮದುಮಗನನ್ನು ನಿಲ್ಲಿಸಿ, ಊರಿನ ಹಿರಿಯರೆಲ್ಲ ಸೇರಿಕೊಂಡು ಮದುಮಗನನ್ನು 'ಇದಿರುಗೊಳ್ಳುವ ಕಾರ್ಯ' ಮಾಡುವರು. ನಂತರ ಮಂಗಳವಾದ್ಯದ ನಾದದ ಜೊತೆಗೆ ಮಡದಿಯರು ಮದುವೆ ಹಾಡು ಹಾಡುವುದು ಇವು ಸಂಪ್ರದಾಯಗಳೇ ಆಗಿವೆ. ಮದುವೆಯ ಸಂದರ್ಭದಲ್ಲಿ ಗಾನ, ನೃತ್ಯ, ಸಾಮಾನ್ಯವಾದವು. ಹೀಗೆ ಗಾನ, ನರ್ತನಗಳು ಸಾಂಸ್ಕೃತಿಕ ಬದುಕನ್ನು ಅನಾವರಣಗೊಳಿಸುತ್ತವೆ. ಎರಡು ನಿಬ್ಬಣ ಒಂದಾಗಿ ಅಗಣಿತ ವಾದ್ಯಗಳ ಧ್ವನಿ ಹಾಗೂ ಸ್ತ್ರೀಯರ ಸುಮಧುರ ಹಾಡನ್ನು ಕೇಳಿ, ಬಂದ ಜನರೆಲ್ಲ ಪುಳಕಗೊಂಡರು. ಮದುಮಗನಿಗೂ,ಬಂದ ಜನರಿಗೆ ಉಪಚಾರ ಮಾಡಿ ಸತ್ಕರಿಸುವದು

ಹೆಣ್ಣಿನವರು ಮಾಡುವ ಪದ್ಧತಿಯಾಗಿದೆ. ನಮ್ಮ ಭಾರತದಲ್ಲಿ ಹಿಂದಿನಿಂದಲೇ ಉಳಿದುಕೊಂಡು ಬಂದಿರುವ ಪದ್ಧತಿ ಇದಾಗಿದ್ದು, ಮದುವೆ ಸಂದರ್ಭಗಳಲ್ಲೆಲ್ಲ ಸಾಮಾನ್ಯವಾಗಿ ನಡೆಯುವ ಆಚರಣೆ ಇದಾಗಿದೆ.

'ಕಂಕಣದಾರ'ವನ್ನು ಇಬ್ಬರು ತಮ್ಮ ಸದ್ಗುಣದ ಗುಣದಿಂದ ಕಟ್ಟಿದರು. ಇಬ್ಬರ ಚಿತ್ತವು ವಿಚಲಿತವಾಗದಂತೆ ಇರಲು ಕಟ್ಟಿದ ಈ ದಾರವೇ ಸಾಕ್ಷಿ ಎಂದು ಇಬ್ಬರು ಭಾವುಕರಾದರು. ಮೊಲ್ಲೆಬೊಮ್ಮಯ್ಯ ಪ್ರಾಣವಲ್ಲಭೆಯ ಕೈಯನ್ನು ಹಿಡಿದು ಕರೆತಂದು ಕನಕ, ರತ್ನದಿಂದ ಕೂಡಿದ ವೇದಿಕೆಯಲ್ಲಿ ಮಾಣಿಕ್ಯ ಪೀಠದಲ್ಲಿ ಇಬ್ಬರು ಕುಳಿತರು. ಹೀಗೆ ಭಾರತೀಯ ಪರಂಪರೆಯಲ್ಲಿ ಇಂದಿಗೂ ಮದುವೆ ಸಂದರ್ಭದಲ್ಲಿ ವರನು ವಧುವಿನ ಕೈಯಿಡಿದು ಮಂಟಪಕ್ಕೆ ಕರೆತರುವ ಪದ್ಧತಿ ಪ್ರಚಲಿತದಲ್ಲಿದೆ.

ಮದುಮಗಳಿಗೆ ಮುತ್ತಿನ ಮನೆಯ ಮೇಲೆ ಕೂಡಿಸಿ, ನವರತ್ನದ ಆರತಿಯನ್ನು ನಿವಾಳಿಸುವದು, ಪರಿಮಳದ ತೈಲವನು ಹಾಕುವುದು, ಹೊನ್ನಿನ ಬಳೆಯ ಕಂಕಣವನ್ನು ಕಟ್ಟುವದು, ಕಸ್ತೂರಿಯ ವಾಸನೆ, ಕುಂಕುಮ, ಮಾಂಗಲ್ಯ, ಮಜ್ಜನ ಇಂದು ನಾವು ಆಚರಿಸುವ 'ಅರಿಷಿನ ಹಚ್ಚುವ ಕಾರ್ಯ' ಇರಬಹುದು. ನಂತರ ಬಿಳಿಯ ಬಟ್ಟೆಯನ್ನು ತೊಟ್ಟ, ಇವರ ಅಲಂಕಾರ ವಸಂತವನ್ನು ಮೀರಿಸುವಂತಿತ್ತು. ರಾರಾಜಿಸುವ ಸೂಳೆಗೇರಿ, ಸೂಳೆಯರ ವರ್ಣನೆ, ಅವರ ಶೃಂಗಾರ, ವೈಯ್ಯಾರ ಎಲ್ಲವೂ ಸಾಂಸ್ಕೃತಿಕ ಬಿಂಬಗಳೇ ಆಗಿವೆ.

'ದೃಷ್ಟಿಯನ್ನು ತೆಗೆಯುವದು' ಒಂದು ಸಂಪ್ರದಾಯವೇ ಆಗಿದೆ. ಮಗುವಿನ ಸ್ನಾನದ ನಂತರ ದಿನವೂ ದೃಷ್ಟಿತೆಗೆಯುವ ಪದ್ಧತಿ ಇದೆ. ಹಾಗೆಯೇ ಮಹಿಳೆಯರಿಗೆ ಋತುಮತಿಯಾದಾಗ, ಮದುವೆ ಸಂದರ್ಭದಲ್ಲಿ, ಗರ್ಭಿಣಿಯರಾದಾಗ ಹಾಗೆಯೇ ಬಾಣಂತಿಯರಿಗೂ, ಕೂಡ ದೃಷ್ಟಿತೆಗೆಯುವ ಪದ್ಧತಿ ಇದೆ ಕರಿಕಾಳು, ಕಸಬರಿಗೆ, ಕಪ್ಪು, ಇಲ್ಲವೆ ಕಾಡಿಗೆ, ಕರಡಿಯ ಕೂದಲು , ಕುರಿಯ ಕೂದಲು, ಕರಿಯದಾರ ಇವೆಲ್ಲವೂ ದುಷ್ಟಶಕ್ತಿಯಿಂದ ರಕ್ಷಣೆ ಒದಗಿಸುತ್ತವೆ. ಎಂಬ ನಂಬಿಕೆಯಿಂದ ದೃಷ್ಟಿ ತೆಗೆಯುತ್ತಾರೆ.

ಗಂಡನ ಮನೆಗೆ ಹೋಗುವ ಮಗಳನ್ನು ತಾಯಿ ರಮಿಸುತ್ತಾಳೆ. ಮುತ್ತಿನ ದಂಡೆಯಲ್ಲಿ ಕಂಗೊಳಿಸಿದ ಮದುಮಗಳನ್ನು ಸುಗುಣೆಯರು ಆರತಿಯನೆತ್ತಿ ಹರಸಿದರು. ಈಗಲೂ ಗಂಡನ ಮನೆಗೆ ಕಳಿಸುವ ಪದ್ಧತಿ ಇದೆ . ಆದರೆ ಬಹುತೇಕವಾಗಿ ಗಂಡನ ಮನೆಗೆ ಅಳುತ್ತ ಹೋಗುವ ಸ್ತ್ರೀಯರು ಕಣ್ಮರೆಯಾಗಿದ್ದಾರೆ. ಹಾಗಾಗಿ ರಮಿಸುವ ಪದ್ಧತಿಯೂ, ಕಣ್ಮರೆಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಅಲ್ಲಲ್ಲಿ ಈ ಪದ್ಧತಿ ಉಳಿದುಕೊಂಡು ಬಂದಿದೆ.

ಮಾಟ, ಮಂತ್ರ, ಮೋಡಿ, ಮಾಟಗಾರ, ಇವು ಸಂಸ್ಕೃತಿಯ ಪ್ರತೀಕಗಳಾಗಿವೆ. ಮಂತ್ರಾವಾದಿಗಳ ಪೂಜಾಕ್ರಮ, ಅವರ ಉಗ್ರರೂಪ, ಹೇಳುವ ಮಂತ್ರ, ಆರಾಧಿಸುವ ದೈವ. ರಾಕ್ಷಸವನ್ನು ಆಹ್ವಾನಿಸುವ ಕ್ರಮ, ತಮ್ಮ ಶಕ್ತಿವೃದ್ಧಿಗಾಗಿ ಪೂಜಾವಿಧಾನ ಇತ್ಯಾದಿ ಸಂಗತಿಗಳನ್ನು ಹೇಳಲಾಗಿದೆ. ಹರಳಯ್ಯ ಮದುವಯ್ಯರ 'ಚೆಮ್ಮಾವುಗೆಯ' ಪ್ರಸಂಗ, ಶರಣ ಸಂಸ್ಕೃತಿಯ ಪ್ರತೀಕವಾಗಿದೆ. ಇವರಿಬ್ಬರೂ ಬೀಗರಾದುದು 'ಮಿಶ್ರ ಸಂಸ್ಕೃತಿ'ಯ ಕುರುಹಾಗಿದೆ.

'ತಾಯಿ'ಯನ್ನು ಕಂಡು ಭಕ್ತಿಯಿಂದ ಕೈಮುಗಿವುದು. 'ಮಾತೃ ಭಕ್ತಿಯ' ಕುರುಹಾಗಿದೆ. ಜಗದೇವ ಮೊಲ್ಲೆಬೊಮ್ಮರು ತಾಯಿಗೆ ತಕ್ಕ ಮಕ್ಕಳಾಗಿ, ತಾಯಿಯ ಮಾತನ್ನು ಪಾಲಿಸುತ್ತಾರೆ. ರುದ್ರಾಕ್ಷಿಬಸಿತ ಜೋಗಿಯರು ಸಾಂಸ್ಕೃತಿಕ ವೈವಿಧ್ಯತೆಯನ್ನು ಬಿಂಬಿಸುತ್ತಾರೆ. ಇನ್ನು ಜಗದೇವನ ತಾಯಿ ಮಾತೃ ಸಂಸ್ಕೃತಿಯ ಸಂಕೇತವಾಗಿದ್ದಾಳೆ. ಇಡೀ ಕ್ರಾಂತಿಯು ಅಂತಿಮ ತಿರುವನ್ನು ಪಡೆಯುವಲ್ಲಿ ಜಗದೇವ ಮತ್ತು ಮೊಲ್ಲೆಬೊಮ್ಮಯ್ಯರಿಗೆ ಪ್ರೇರಣೆ ನೀಡುತ್ತಾಳೆ. ಶರಣರಿಗೆ ಶಿಕ್ಷೆಯಾದುದನ್ನು ಕಂಡು ಸುಮ್ಮನಿರುವ ನೀವು 'ನಾಯಿಗಳೇ' ಎಂದು ಮೂದಲಿಸಿ, ಅವರು ಬಿಜ್ಜಳನನ್ನು ಕೊಲ್ಲುವಂತೆ ಮಾಡುತ್ತಾಳೆ. ಹೀಗಾಗಿ 'ಅಂದು ತಾಯಿಯ ಮಾತನ್ನು ಪಾಲಿಸುವ ಪುತ್ರರಿದ್ದರು.' ಸ್ತ್ರೀಗೆ ಅಷ್ಟೊಂದು ಸ್ವಾತಂತ್ರವಿತ್ತು, ಬಹುತೇಕ ನಡುಗನ್ನಡ ಕಾಲಘಟ್ಟ ಮಹಿಳೆಯರಿಗೆ ಸ್ವಾತಂತ್ರ, ಸಮಾನತೆಯನ್ನು ಒದಗಿಸಿತ್ತು. ಹೀಗಾಗಿಯೇ ಅಕ್ಕಮಹಾದೇವಿ, ಆಯ್ದಿಕ್ಕಿಮಾರಮ್ಮ, ಸೂಳೆ ಸಂಕವ್ವೆ ಮುಂತಾದ ಶರಣೆಯರು ಇದ್ದರೆಂಬುದನ್ನು ಮರೆಯುವಂತಿಲ್ಲ.

ಚಾಮರವನ್ನು ಎಡಬಲಕ್ಕೆ ಬೀಸುವ ಸುಮಂಗಲಿಯರು, ಸಿಂಹಾಸನ, ಅರಮನೆಯ ವೈಭವ, ಬೀದಿಯ ಅಲಂಕಾರ, ವೇಷಭೂಷಣ, ಉಡುಗೆ ತೊಡುಗೆಗಳನ್ನು ಕವಿ ಹೃದ್ಯವಾಗಿ ವರ್ಣಿಸಿದ್ದಾನೆ. ಜಗದೇವನ 'ಚಿತ್ತದಲಿ ನಿಂದ ಭವಾನಿಯರಸನು ಕಲ್ಬುರದಿಂದ ಸತ್ಯ ಶರಣಾದ ನಿನ್ನ ಪೂರ್ವ ಸಖ, ವೀರಗಣೇಶ್ವರನಾಗಿ ಜನಿಸಿದ್ದಾನೆ.' ಆತ ನಿನ್ನನು ಕಾಣಲು ಬರುತಿಹನು ನೀನು ಆತನನ್ನು ಎದುರ್ಗೊಂಡು ಕರೆತರೆಂದು ತಿಳಿಸುತ್ತಾನೆ. ಆಗ ಜಗದೇವ ಪ್ರಸಾದವೆಂದು ತನ್ನ ಜೀವದ ಸಖನನ್ನು ಹೊಗಳುತ್ತಾ ತನ್ನ ಮನೆಗೆ ಕರೆದೊಯ್ಯುತ್ತಾನೆ. ಅಲ್ಲಿ ಜಗದೇವನ ತಾಯಿ ಮಾದೇವಿ ಮೊಲ್ಲೆಬೊಮ್ಮಯ್ಯನಿಗೆ ಪೀಠವನ್ನು ಕೊಟ್ಟು, ಪಾದಾರ್ಚನೆಯನ್ನು ಮಾಡಿದಳು. ರಸಾನ್ನವನ್ನು ಹೊನ್ನಿನ ಹರಿವಾಣದಲ್ಲಿ ಮೊಲ್ಲೆಬೊಮ್ಮಯ್ಯನಿಗೆ ಹಾಗೂ ಜಗದೇವನಿಗೆ ಧರಣಿಯ ಮೇಲೆ ಹಾಕಿದಳು. ಇದರಿಂದ ಆಶ್ಚರ್ಯಗೊಂಡು ಮೊಲ್ಲೆಬೊಮ್ಮನು ಹೀಗೇಕೆ ಎನಲು ಮಾದೇವಿ ನಸುನಗುತ 'ಗಣಪರ್ವ'ವನ್ನು ಮಾಡುತ್ತೇನೆಂದು ಬಸವಣ್ಣನಿಗೆ ಆಹ್ವಾನವಿತ್ತು. ಅವನು ಬರುವ ಪೂರ್ವದಲ್ಲಿ ಬ್ರಾಹ್ಮಣರನ್ನು ಕರೆದು ಸತ್ಕರಿಸಿದನು. ಇದರಿಂದ ಬಸವಣ್ಣನು ಕೋಪಗೊಂಡನು ಜಗದೇವ ಕ್ಷಮೆಯಾಚಿಸಲು ಭವಿಯಾದ ಬ್ರಾಹ್ಮಣನನ್ನು ಮನೆಯಲ್ಲಿ ಕರೆದು ಆರಾಧಿಸಿರುವೆ. 'ಭಕ್ತನಾದವನು ಉದಯದಲ್ಲಿ ಬ್ರಾಹ್ಮಣನನ ಮುಖವನ್ನು ನೋಡಬಾರದು,' ನೋಡಿದವನಿಗೆ ಶರಣ ಎನಲಾಗದು. 'ಹೋಗು ದ್ರೋಹಿ ನಿಲ್ಲದೆ' ಎನ್ನಲು, ಜಗದೇವ ನನ್ನ ಅಪರಾದಕ್ಕೆ ತಪ್ಪುದಂಡವನ್ನು ಕೊಟ್ಟು, ನನ್ನ ಕಾಪಾಡಿ ಎಂದಾಗ ಬಸವಣ್ಣನು ನಿನ್ನ ಮನೆಯ ಪಾತ್ರೆ, ಪದಾರ್ಥಗಳು ಒಂದು ಉಳಿಯದಂತೆ ವಿಭಾಗಿಸಿ ಎಲ್ಲವನ್ನು ಚೆಲ್ಲಿ, ಹೊಸ ವಸ್ತುಗಳನ್ನು ತರಿಸಿ, ಚಂದವಾಗಿ ಅಡುಗೆ ಮಾಡಿಸಿ, ನಮ್ಮನ್ನು ಕರೆಯಿಸೆಂದನು. ಇದರ ಒಂದು ಕುರುಹಾಗಿ ಇಂದಿಗೂ ಕೂಡ ಕಲ್ಲೂರಿನಲ್ಲಿ ಒಂದು ಆಚರಣೆ ಇದೆ.

ಜಗದೇವ ಆಚರಿಸಿದ 'ಗಣಪರ್ವ'ದ ಕುರಿತಾಗಿ ಕಲ್ಲೂರಿನಲ್ಲಿ ಪಂಚಮಿಯ ನಂತರ ಸಮಸ್ತ ಗುರು ಹಿರಿಯರು ನಾಲ್ಕೈದು ಮನೆಗಳಿಂದ ಕಿಟ್ಟದ ಬಸವಣ್ಣನ ಚೆಟ್ಟುಗಳನ್ನು ಕಟ್ಟಿಸಿ, ಬಣ್ಣದ ಹಾಳೆ, ವೀಳ್ಯದ ಎಲೆಯಿಂದ ಅಲಂಕೃತಗೊಳಿಸಿ, ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಪಶ್ಚಿಮ

ಮುಖದ ಅಗಸೆ ಬಾಗಿಲಿನಿಂದ, ಮೊದಲನೆಯ ಚೆಟ್ಟು ಹೊರಡುತ್ತದೆ. ನಂತರ ಇನ್ನುಳಿದ ಚೆಟ್ಟುಗಳು ಒಂದರ ನಂತರ ಒಂದು ಸಾಲಾಗಿ ಮೆರವಣಿಗೆಯ ಮೂಲಕ ಬರುತ್ತವೆ. ಎಲ್ಲ ಚೆಟ್ಟುಗಳು ಕಲ್ಲಿನಾಥ ದೇವಸ್ಥಾನದ ಮುಂದಿನ ರಸ್ತೆಯ ಮಾರ್ಗವಾಗಿ ಆಗ್ನೇಯ ದಿಕ್ಕಿನಲ್ಲಿರುವ ಬಾವಿಗೆ ಬರುತ್ತವೆ. ಆ ಸಮಯದಲ್ಲಿ ಸ್ತ್ರೀಯರು ತಮ್ಮ ತಮ್ಮ ಮನೆಗಳಲ್ಲಿ ವಿವಿಧ ದವಸ ಧಾನ್ಯಗಳಿಂದ ಹಾಕಿದ ಸಸಿಗಳನ್ನು ತಂದು ಅರ್ಪಿಸುತ್ತಾರೆ. ನಂತರ ಗಣಾರಾಧನೆ ಮಾಡಲಾಗುತ್ತದೆ.

ಅದೇ ದಿನ ಸಾಯಂಕಾಲ ಪೂರ್ವದಿಕ್ಕಿನಲ್ಲಿರುವ ಕರೆಕಲ್ಲೇಶ್ವರ ಮತ್ತು ಸಂಗಮನಾಥನಿಗೆ ಶ್ರೀ ಕಲ್ಲಿನಾಥೇಶ್ವರನ ನಂದಿಕೋಲು ಮತ್ತು ಭಜನೆ, ಡೊಳ್ಳು, ಕಳಸ ಹೋಗುವವು. ಸಮಸ್ತರು ಉಂಡೆ, ಕೊಬ್ಬರಿಯನ್ನೋಯ್ದು ಒಟ್ಟಾಗಿ ಉಪಹಾರ ಸ್ವೀಕರಿಸುವರು. ಬಾದ್ರಪದ ಮಾನಸ ಮೊದಲ ಸೋಮವಾರ ಗಣಾರಾಧನೆಯನ್ನೆರ್ಪಡಿಸಿ, ದವಸ ಧಾನ್ಯ ಸಲ್ಲಿಸುವರು. ಸಂಪ್ರದಾಯದಂತೆ ೧೦ ಚೀಲ ಮಾದಲಿ, ೨೦ ಚೀಲ ಅನ್ನವನ್ನು ಮಾಡಿಸಿ ಸುತ್ತಮುತ್ತಲಿನ ಜನರೆಲ್ಲರಿಗೂ ಅನ್ನ ಸಂತರ್ಪಣೆ ಮಾಡುವರು.

ಕಲ್ಲೂರಿನ ವಾಯುವ್ಯ ದಿಕ್ಕಿನಲ್ಲಿರುವ ಬೇವಿನ ಮರದ ಬಸವೇಶ್ವರನ ಸನ್ನಿಧಿಗೆ ಮಡಿಯಿಂದ ಮಾಡಿದ ಅನ್ನ ಪ್ರಸಾದವನ್ನು ಬಂಡಿಯಲ್ಲಿ ತೆಗೆದುಕೊಂಡು ಹೋಗುವರು. ಹೀಗೆ ಹೋಗುವಾಗ ಕಲ್ಲೇಶ್ವರ ದೇವಾಲಯದಿಂದ ನಂದಿಕೋಲು ವಾದ್ಯ, ಡೊಳ್ಳು, ಮೇಳಗಳೊಂದಿಗೆ ಹೋಗಿ ನೈವಿಧ್ಯ ಅರ್ಪಿಸಿ, ಜಂಗಮರಿಗೆ ಗಣಾರಾಧನೆಯನ್ನು ಮಾಡುತ್ತಾರೆ. ಗಣಾರಾಧನೆಯ ನಂತರವೂ ಪ್ರಸಾದ ಹೆಚ್ಚಿಗೆ ಉಳಿದರೆ ಅದು ಗ್ರಾಮಕ್ಕೆ ಒಳ್ಳೆಯದೆಂಬ ಪ್ರತೀತಿ ಇದೆ. ಈ ಗಣಾರಾಧನೆಯು ಜಗದೇವ ಆಚರಿಸಿದ 'ಗಣಾರಾಧನೆ'ಯ ಸಂಪ್ರಾದಾಯದ ಮುಂದುವರಿಕೆಯ ಭಾಗವಾಗಿ ಇಂದಿಗೂ ಉಳಿದಿದೆ.

ಬಿಜ್ಜಳನನ್ನು ಕೊಂದ ಜಗದೇವ, ಮೊಲ್ಲೆಬೊಮ್ಮಯ್ಯರು ಬಸವಣ್ಣನ ಮೇಲೆ ಕುಳಿತು ರ‍್ಯಾವಣಿಕೆಗೆ ಬಂದರೆಂಬ ಐತಿಹ್ಯವಿದೆ. ಆದರೆ ಕಾವ್ಯದಲ್ಲಿ ಬಿಜ್ಜಳನ ವಧೆಯ ನಂತರ 'ಜಗದೇವ, ಮೊಲ್ಲೆಬೊಮ್ಮಯ್ಯ'ರು ಜಗದೇವನ ಮನೆಗೆ ಬರುತ್ತಾರೆ. ಅಲ್ಲಿ ತಾಯಿ ಮಾದೇವಿ ಜಳಕವನ್ನು ಮಾಡಿಸಿದ, ನಂತರ ಲಿಂಗಾರ್ಚನೆ ಮಾಡುತ್ತಾರೆ. 'ಮಡಿ'ಯ ಪರಿಕಲ್ಪನೆ ಹಿಂದೆಯೂ ಇತ್ತು. ಇಂದು ಕೂಡ ನಾವು ಸ್ನಾನವಿಲ್ಲದೆ ಪೂಜೆ ಮಾಡುವುದಾಗಲೀ, ನೈವೀದ್ಯೆದ ಅಡುಗೆಯಾಗಲೀ ಮಾಡುವದಿಲ್ಲ. ಮಡಿಯಿಂದಲೇ ದೇವರು, ದೇವರ ಕೆಲಸ ನಡೆಯುತ್ತದೆ. ನಂತರದಲ್ಲಿ ತಾಯಿ ಅವರಿಗೆ ಥಳಥಳಿಸುವ ಹರಿವಾಣದಲ್ಲಿ ದೇವಾನ್ನವನ್ನು ಬಡಿಸುತ್ತಾಳೆ.

ಈ ಸಂಪ್ರದಾಯದ ಮುಂದುವರಿಕೆಯ ಕುರುಹಾಗಿ ಶಿವರಾತ್ರಿಯ ದಿನದಂದು ಒಂಬತ್ತು ದವಸ ಧಾನ್ಯಗಳ ನೈವೀದ್ಯೆವನ್ನು ಕಲ್ಲಿನಾಥನಿಗೆ ಅರ್ಪಿಸುತ್ತಾರೆ. ದೇವರಿಗೆ ದವಸ ಧಾನ್ಯಗಳನ್ನು ಮೀಸಲಿಡುವುದು, ಹಾಲು, ಹೈನನ್ನು ಮೀಸಲಿಡುವ ಪದ್ಧತಿ ಯಾವಾಗಲೂ ಇದ್ದೆ ಇದೆ. ಗ್ರಾಮಸ್ಥರು ಕೊಟ್ಟ ಆಹಾರ ಧಾನ್ಯಗಳನ್ನು ಒಂದು ಮನೆಯಲ್ಲಿ ಕ್ರೂಢೀಕರಿಸುವರು. ಇಂಥ ಮನೆಯು 'ಒಂಬತ್ತು ಹರಿವಾಣದ ಮನೆ' ಎಂದೇ ಪ್ರಸಿದ್ಧವಾಗಿದೆ.ಜಗದೇವನ ತಾಯಿ ಶಿವದ್ರೋಹಿಯನ್ನು ಕೊಂದು, ಬಂದ ವಿಜಯೋತ್ಸವಕ್ಕಾಗಿ 'ನೆಲದಲ್ಲಿ ಹಾಕುತ್ತಿದ್ದ ಅನ್ನ'ವನ್ನು ಅಂದಿನಿಂದ 'ಹರಿವಾಣ'ದಲ್ಲಿ ಹಾಕತೊಡಗಿದಳು.ಹರಿವಾಣ ಎಂದರೆ ಶಿವನಿಗಾಗಿ ನೈವೇದ್ಯ ಮಾಡಲು ತೆಗೆದುಕೊಂಡು ಹೋಗುವ ಪ್ರಸಾದದ ತಟ್ಟೆ, ಒಂಬತ್ತು ತರಹದ

ನೈವೇದ್ಯವನ್ನು 'ಹರಿವಾಣ'ದ ಮನೆಯಿಂದ ಆರತಿ ಮುಂತಾದ ವಾದ್ಯಗಳೊಂದಿಗೆ ಮಡಿಯಿಂದ ಹರಿವಾಣ ತೆಗೆದುಕೊಂಡು ಹೋಗಿ, ನೈವೇದ್ಯ ಹಿಡಿಯುವರು. ಗೋಧಿ, ಕಡ್ಲಿ, ಎಳ್ಳು, ನವಣಿ, ಕೊಬ್ಬರಿ,ಅನ್ನ, ಕಬ್ಬು, ಹೀಗೆ ಒಂದಾದ ನಂತರ ಒಂದರಂತೆ ನೈವೇದ್ಯ ಹೋಗುವದು.ಈ ನೈವೇದ್ಯ ಕಲ್ಲಿನಾಥನ ಸನ್ನಿಧಿ ತಲುಪುವಷ್ಟರಲ್ಲಿ ಬೆಳಿಗ್ಗೆ ಒಂಬತ್ತು ಗಂಟೆಯಾಗುತ್ತದೆ. ನಂತರದಲ್ಲಿ ಒಂಬತ್ತು ಹರಿವಾಣದ ನೈವೇದ್ಯವನ್ನು (ಪ್ರಸಾದ) ಸಮಸ್ತ ಜನರು ಸ್ವೀಕರಿಸುವರು.

ರ‍್ಯಾವಣಿಕೆಯಲ್ಲಿ ಬಿಜ್ಜಳನ ವಧೆಯ ನಂತರ, ಇಬ್ಬರೂ ಬಸವಣ್ಣನನ್ನು ಏರಿ, ರ‍್ಯಾವಣಕೆಗೆ ಬರುತ್ತಾರೆ. ಅಲ್ಲಿ ಹೀಗೆ ಬರುವಾಗ ದಣಿದು ಮಾರ್ಗದಲ್ಲಿ ಬೂದಗುಂಪಾ ಹಾಗೂ ರ‍್ಯಾವಣಕಿ ನಡುವಿನ ಸ್ಥಳದಲ್ಲಿ ಕುಳಿತುಕೊಂಡರು. ಹೀಗಾಗಿ ಶ್ರಾವಣಮಾಸದ ಸೋಮವಾರ 'ಬಸವಣ್ಣನನ್ನು ಕರೆದುಕೊಳ್ಳುವ ಹಬ್ಬ' ಆಚರಿಸಲಾಗುತ್ತದೆ. ಹೀಗೆ ಶರಣ ಸಂಸ್ಕೃತಿಯನ್ನು ಒಪ್ಪಿದ ಜನರು ಹರ್ಷೋದ್ಗಾರದ ಜೊತೆಗೆ ಶರಣರನ್ನು ಬರಮಾಡಿಕೊಂಡರೆಂಬ, ಸಂಕೇತವಾಗಿ ಈ ಹಬ್ಬದ ಆಚರಣೆ ನಡೆಯುತ್ತದೆ.ಹೀಗಾಗಿ ಶರಣರ ಸಾಂಸ್ಕೃತಿಕ ಅನನ್ಯತೆಯನ್ನು ಕಟ್ಟಿಕೊಡುವಲ್ಲಿ ಈ ಕಾವ್ಯ ಯಶಸ್ವಿಯಾಗಿದೆ.

**ಕೊನೆ ಟಿಪ್ಪಣಿಗಳು**

೧. **ಕರ್ನಾಟಕ ಚರಿತ್ರೆ** (ಸಂ) ಷೇಕಅಲಿ ಪು.೬೭

೨. ಅದೇ ಪುಟ. ೭೦

೩. ಭೀಮಕವಿಯ **ಬಸವಪುರಾಣ** ಪುಟ.IX

೪. ಗುರುಲಿಂಗ ದೇಶಿಕನ **ಲಿಂಗ ಪುರಾಣ** ಪುಟ.೩೬೧

೫. **ಧರ್ಮಭಂಡಾರಿ ಬಸವಣ್ಣನವರು** ಪುಟ.XXIX

೬. **ಬಸವ ಪುರಾಣ ಪರಂಪರೆ** (ಸಂ) ಡಾ.ವೀರಣ್ಣ ರಾಜೂರ ಪು.೧೩

೭. ಅದೇ ಪು. ೧೧

೮. **ಬೆಡಗು** ಜಿ.ಎಸ್.ಶಿವರುದ್ರಪ್ಪ. ಪು.೬೨

* * *

ಒಂದು ಕಾವ್ಯಕ್ಕೆ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಮಹತ್ವವಿದ್ದಂತೆ, ಸಾಹಿತ್ಯಿಕ ಅಂಶಗಳು ಗಮನಾರ್ಹವೆನಿಸುತ್ತವೆ. ಈ ದೃಷ್ಟಿಯಿಂದ ದೇಶಿಯ ಕಾವ್ಯಗಳು, ಛಂದೋಲಯಗಳಲ್ಲಿ ರಚನೆಗೊಂಡು, ವರ್ಣನೆಗಳು, ಅಲಂಕಾರ, ಛಂದಸ್ಸು, ಗಾದೆಮಾತುಗಳಲ್ಲಿ ದೇಶಿಯ ಸೊಗಡನ್ನು ಹೊಂದಿರುತ್ತವೆ. ಮದ್ಯಕಾಲೀನ ಸಾಂಸ್ಕೃತಿಕ ವಿನಿಮಯವನ್ನು ಗುರುತಿಸಲು ದೊಡ್ಡ ಆಕರ ನಮ್ಮ ಸಾಹಿತ್ಯಿಕ ಕೃತಿಗಳಾಗಿವೆ. ಇಂಥ ಸಾಹಿತ್ಯಿಕ ಕೃತಿಗಳಲ್ಲಿ ಮೊಲ್ಲೆಬೊಮ್ಮಯ್ಯಗಳ ಕಾವ್ಯವೂ ಒಂದು ಶಿವಶರಣರ ಕ್ರಾಂತಿಯಿಂದಾಗಿ ಕನ್ನಡ ಸಾಹಿತ್ಯ ವಾಹಿನಿಯು ಹೊಸ ದಿಸೆಯನ್ನು ಪಡೆಯಿತು ಪಾಂಡಿತ್ಯ ಮುಖಿಯಾಗಿದ್ದ ಸಾಹಿತ್ಯವನ್ನು ಜನತಾ ಸಮ್ಮುಖವಾಗಿ ಪರಿವರ್ತಿಸಿದ ಕೀರ್ತಿ ಶರಣಗೆ ಸಲ್ಲುತ್ತದೆ.

ನಡುಗನ್ನಡ ಸಾಹಿತ್ಯ ಭಾಷೆ, ಜನಪದ ಸತ್ವ, ದೇಶಿಯ ಸೊಗಡನ್ನು ಒಳಗೊಂಡಿದೆ. ಜನಸಮ್ಮೂಖವೂ, ದೇಶಿಸಂಪನ್ನವೂ ಆದ ಕಾವ್ಯದಲ್ಲೆಲ್ಲ, ಜನ ಜೀವನದ ವೈವಿದ್ಯೆ ವೈಚಿತ್ರ್ಯಗಳ ಸಮೃದ್ಧ ಬಳಕೆ ಆಗಿದೆ. 'ಧೂಪದ ರಾಚೇಶ' ವಿರಚಿತ 'ಮೊಲ್ಲೆಬೊಮ್ಮಯ್ಯಗಳ ಕಾವ್ಯವು' ಒಟ್ಟಾರೆಯಾಗಿ ಹದಿನೇಳು ಸಂಧಿಯನ್ನು ಹೊಂದಿದ್ದು, ಒಂದರಿಂದ ಹನ್ನೆರಡನೇಯ ಸಂಧಿಯವರೆಗೆ ಕಾವ್ಯನಾಯಕನ ವಿಚಾರವನ್ನು ಹೇಳಿದರೆ, ಹನ್ನೆರಡರಿಂದ ಹದಿನಾರನೇಯ ಸಂಧಿಯವರೆಗೆ 'ಬಸವಣ್ಣ' ಮತ್ತು 'ಹರಳಯ್ಯ, ಮಧುವರಸರ' ಕಥೆಗಳು ಬಂದಿವೆ. ಹದಿನೇಳನೆಯ ಸಂಧಿಯು ಸಂಪೂರ್ಣವಾಗಿ 'ಜಗದೇವ' ಮತ್ತು 'ಮೊಲ್ಲೆಬೊಮ್ಮಯ್ಯರ ಕಥೆ'ಯನ್ನೆ ಒಳಗೊಂಡಿದೆ. ಕವಿಯು ಕೃತಿ ರಚನೆಯ ಸಂದರ್ಭದಲ್ಲಿ ತನಗಿಂತ ಪೂರ್ವದ ಸಾಹಿತ್ಯವನ್ನು ಉಪಯೋಗಿಸಿಕೊಂಡಿದ್ದಾನೆ. ಹಾಗೆಂದು ಈ ಕೃತಿಯು ಪೂರ್ವದ ಕೃತಿಗಳ ಪಡಿಯಚ್ಚೆ ಆಗಿಲ್ಲ ಬದಲಾಗಿ ಕವಿಯ ಸ್ವಂತಿಕೆ, ಸ್ವತಂತ್ರ ಪ್ರತಿಭೆಗಳು ಮನೋಜ್ಞವಾಗಿ ಮೂಢಿ ಬಂದಿವೆ.

**ಕವಿಯ ಆಶಯ**

ಕವಿ 'ಧೂಪದ ರಾಜೇಶ' 'ಪಡಿವಿಡಿ ಬಗೆಯ' 'ಸಿದ್ಧನಂಜೇಶನ ಶಿಷ್ಯ'. ಇದು 'ಗುರುಪರಂಪರೆ'ಯನ್ನು ಪಂಚಪೀಠವನ್ನು ಸಂಕೇತಿಸುತ್ತದೆ. ಹಾಗಾದರೆ ಈ ಕೃತಿ ರಚನೆಗೊಂಡದ್ದು ೧೮ನೇ ಶತಮಾನ ಇದರಲ್ಲಿಯ ಘಟನೆ ೧೨ನೆಯ ಶತಮಾನದ್ದು ಕವಿ ೧೨ನೇಯ ಶತಮಾನದ ಸ್ಥಿತಿಗತಿಯನ್ನು ಕಣ್ಣಾರೆ ಕಂಡವನಲ್ಲ.

ತನ್ನ ಸುತ್ತಮುತ್ತಲಿನ ಜನರು ಹೇಳುವ ಸಂಗತಿಯನ್ನು ಆಧರಿಸಿಯೇ ಕವಿ ಈ ಕಾವ್ಯ ರಚಿಸಿದ್ದಾನೆ. ಹೀಗಾದಾಗ ಕಾವ್ಯವನ್ನು ಸಮಕಾಲೀನಗೊಳಿಸುವ ಕಾರ್ಯ ಸಹಜವಾಗಿಯೇ ನಡೆಯುತ್ತದೆ. ಹೀಗೆ ನಡೆಯುವಾಗ ಘಟನೆಗಳು ಬದಲಾಗುವುದು ಸಹಜ.

ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ ಚಳುವಳಿಯ ನಂತರದಲ್ಲಿ ಈ ಶೈವ ಪ್ರಭಾವ ಹಂಪಿ ಪರಿಸರದಲ್ಲಿದ್ದುದು ಕಂಡುಬರುತ್ತದೆ. ಹೀಗಾಗಿ ಅವರ ಪ್ರಭಾವ ಸಹಜವಾಗಿಯೇ ಕವಿಯ ಮೇಲಾಗುತ್ತದೆ. ಕವಿಯ ಮನಸ್ಥಿತಿ ಹಾಗೂ ಅಂದಿನ ಸಾಮಾಜಿಕ ಸ್ಥಿತಿಗತಿಯ ಚಿತ್ರಣ ನಮಗೆ ದೊರೆಯುತ್ತದೆ. ಕವಿಯು ಶರಣ ಧರ್ಮವನ್ನೊಪ್ಪಿ, ಶರಣರ ಮೌಲ್ಯಗಳನ್ನು ಉನ್ನತೀಕರಿಸುವ ಉದ್ದೇಶ ಈತನದಾಗಿದ್ದು. ಇಡೀ ಶರಣ ಚಳುವಳಿಯ ಚಿತ್ರಣವನ್ನೇ ಬದಲಾಯಿಸಿದ ಪ್ರಮುಖ ಘಟನೆ ಶಿಕ್ಷೆ, ಎಳೆಹೂಟೆ ಪ್ರಸಂಗ, ಶೂಲಕ್ಕೇರಿಸುವುದು ಇವೆಲ್ಲ ಅವನಿಗೆ ಚಿರಪರಿಚಿತವಾಗಿದ್ದವು.

## ಪ್ರದೇಶ

ಕವಿಯ ಊರು ಕಲ್ಲೂರು, ಕಾವ್ಯದ ನಾಯಕನ ಊರು ಕಲ್ಲೂರಿನ ಹತ್ತಿರವೇ ಇರುವ ರ್‍ಯಾವಣಕಿ. ಹೀಗೆ ಕವಿ ತನ್ನ ಕಾವ್ಯದಲ್ಲಿ ಉಲ್ಲೇಖಿಸಿರುವ ಊರುಗಳೆಲ್ಲ ಇಂದಿಗೂ ಪ್ರಸ್ತುತವಿದು. ಅವು ಪೂರ್ವಕಾಲದಲ್ಲಿ 'ನರೆಯಂಗಲ್ಲು ಪನ್ನೆರಡರ' ಆಡಳಿತಕ್ಕೆ ಒಳಪಟ್ಟಿದ್ದವು. ಈತ ಇದೇ ಭಾಗದಲ್ಲಿದ್ದು ನಂತರದಲ್ಲಿ ಕಲ್ಯಾಣಕ್ಕೆ ಬಂದನು. ಹೀಗೆ ಈ ಕಾವ್ಯ ಪ್ರಾದೇಶಿಕ ಭಿನ್ನತೆಯನ್ನು ಪಡೆದಿದೆ. ಕೋಡಿಕೊಪ್ಪ ಎಂಬುದು ಕಿರು ನರೆಯಂಗಲ್ಲು ಆಗಿದೆ. ಹೀಗೆ ಕವಿಯ ಮನೋಧರ್ಮ ಇಲ್ಲಿ ಕಂಡುಬರುತ್ತದೆ. ಶರಣರು ಬದುಕಿದ ಜೀವನ, ಆದರ್ಶ ಮೌಲ್ಯಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ಕಲ್ಲೂರು, ರ್‍ಯಾವಣಕಿ ಕೋಡಿಕೊಪ್ಪ, ನರೆಯಂಗಲ್ಲು ಎಲ್ಲ ಕಲ್ಯಾಣದ ಚಿತ್ರಣವನ್ನು ನೀಡುತ್ತಾನೆ. ನರೆಯಂಗಲ್ಲಿನ ನ್ಯಾಯಕಟ್ಟೆಯಲ್ಲಿ ನ್ಯಾಯ ನಿರ್ಣಯವಾಗುತ್ತದೆ.

ಪೊಳಲೊಳಗೆಯಿದೊಪೆವೆಂದೆನೆ ಮಗು
ಳೆಲೆ ದೇವನೆ ನಿಮ್ಮಯ ಪೆಸರದೇನೆನೆ
ಕಲಿನಾಥನುಮೆಂದೆಂಬುವರೆಮ್ಮಭಿಧಾನಮನೆಂದೆನು
ಮಿಳಿತೆಲ್ಲರಿದೀತನ ತಂತ್ರವುಮೆನು
ತಲಿ ಪೆಸರಿಟ್ಟರುಮಾ ಕಟ್ಟೆಯೊಳು
ಜ್ವಲಿಸುತಿಹ ಲಿಂಗಕ್ಕೆ ಕಟ್ಟೆಯ ಕಲ್ಲೇಶ್ವರನೆಂದೆನುತೆ. (೩–೫೦)

ಹೀಗೆ ನರೆಗಂಲ್ಲಿನಲ್ಲಿ ನ್ಯಾಯದ ಕಟ್ಟೆ ಇದ್ದು, ಅಲ್ಲಿಯ ಲಿಂಗಕ್ಕೆ ಕಟ್ಟೆಯ ಕಲ್ಲೇಶ್ವರನೆಂದೆ ಸ್ಥಳೀಯರು ಹೇಳುತ್ತಾರೆ. ಎಂಬ ವಿಷಯವನ್ನು ಸ್ಪಷ್ಟಪಡಿಸುವದರ ಜೊತೆಗೆ ಈ ಎಲ್ಲಾ ಊರುಗಳ ಒಡನಾಟವಿದ್ದುದನ್ನು ಇಲ್ಲಿ ತಿಳಿಸುತ್ತಾನೆ. ಕಾವ್ಯದ ವಸ್ತು, ಪ್ರದೇಶ, ಕಾವ್ಯ ರಚಿಸಿದ ಹಿನ್ನೆಲೆ ಕಾವ್ಯದ ಸ್ಪೂರ್ತಿ, ಶರಣರ ಬದುಕು, ಆದರ್ಶ, ಸಾಮಾಜಿಕ ಸ್ಥಿತಿಗತಿ ಇತ್ಯಾದಿ ವಿಷಯಗಳನ್ನು ಒಳಗೊಂಡಿದೆ.

**ಕಾವ್ಯದ ವಸ್ತು**

ಐತಿಹಾಸಿಕತೆಯೊಂದಿಗೆ, ಪೌರಾಣಿಕತೆಯುನ್ನು, ಪಾರಮಾರ್ಥದೊಂದಿಗೆ ಲೌಕಿಕವನ್ನು ಸಮ್ಮಿಳಿತಗೊಳಿಸಿದ್ದಾನೆ. ಕಾವ್ಯದ ಧರ್ಮದ ಜೊತೆಗೆ ಶರಣ ಧರ್ಮವನ್ನು ಬಿತ್ತರಿಸುವುದು ಇವನ ಕಾವ್ಯೋದ್ಧೇಶವಾಗಿತ್ತು. ಶರಣರ ಬಹುಮುಖ್ಯ ಮೌಲ್ಯವೆಂದರೆ ಇಲ್ಲದ ಸ್ವರ್ಗವನ್ನು ಹುಡುಕದೇ, ಜನಮನದ ಆಳದಲ್ಲಿಯೇ ಹುದುಗಿರುವ ಸ್ವರ್ಗವನ್ನು ಹುಡುಕುವುದೇ ಆಗಿದೆ. ಭಾಷೆಯ ದೃಷ್ಟಿಯಿಂದಲೂ ಕಾವ್ಯ ಅಪೂರ್ವವಾಗಿದೆ. ಇಲ್ಲಿ ಉಪಯೋಗಿಸಿದ ಭಾಷೆ ಜನರಾಡುವ ಸರಳ ಕನ್ನಡವಾಗಿದೆ. ಮಾರ್ಗವನ್ನು ಕೊರೆದು ಕಾವ್ಯ ದೇಶೀಯತೆಯೆಡೆಗೆ ತಿರುಗಿದದನ್ನು ಇಲ್ಲಿ ಗುರುತಿಸಬಹುದು. ಈ ವೇಳೆಗಾಗಲೇ ಇಂತಹ ಕಾರ್ಯಗಳು ಕಾವ್ಯಗಳಲ್ಲೆಲ್ಲ ನಡೆದು ಬಂದದ್ದನ್ನು ಗುರುತಿಸಬಹುದು.

ಶರಣ ಚಳುವಳಲ್ಲಿ ಬಹುಮುಖ್ಯವಾಗಿ ನಡೆದ ಘಟನೆಯೆಂದರೆ. ಶರಣರೆಲ್ಲ ಸಾಂಪ್ರಾದಾಯಿಕ ನ್ಯೂನ್ಯತೆಗಳನ್ನು ಸರಿಪಡಿಸಿ, ಒಂದು ನವಸಮಾಜದ ನಿರ್ಮಾಣ ಮಾಡಬಯಸಿದರು. ಸತ್ವಹೀನ ಸಮಾಜದ ದಾರುಣ ಭೇದನೀತಿ, ಜನತೆಯ ಮೌಢ್ಯತೆಯಿಂದಾಗಿ ತುಂಬಿದ ಅಂಧಶ್ರದ್ಧೆಯ ವಿಷಾನಿಲ, ಡಂಭಾಚಾರದ ಜಿಡ್ಡು, ದುರಹಂಕಾರದ ದುಷ್ಟತನ ಎಲ್ಲವನ್ನು ವಚನಕಾರರು ಜ್ಞಾನ ದೀಪವನ್ನು ಹೊತ್ತಿಸಿ, ವಿಚಾರವಂತಿಕೆಯ ಬೆಳಕುಮೂಡಿಸಿದರು. ಡಂಭಾಚಾರದ ವೇಷ ತೆಗೆದು ನೈಜಾಚಾರಣೆಯನ್ನೂ ನೆಲೆಗೊಳಿಸಿ ಪ್ರಾಮಾಣಿಕದೃಷ್ಟಿ ಪ್ರಯತ್ನಗಳನ್ನು ಪ್ರೋತ್ಸಾಹಿಸಿದರು. ನಿಷ್ಠೆ, ಆತ್ಮವಿಶ್ವಾಸವನ್ನು ಬೆಳೆಸಿದರು. ಆತ್ಮೋದ್ಧಾರದ ಜೊತೆಗೆ ಸಮಾಜೊದ್ಧಾರಗಳೆರಡನ್ನೂ ಏಕಕಾಲಕ್ಕೆ ಸಾಧಿಸಿದ ಶಿವಶರಣರ ಕಥೆಯನ್ನೆ ಇಲ್ಲಿ ವಸ್ತುವಾಗಿ ಕವಿ ತೆಗೆದುಕೊಂಡಿದ್ದಾನೆ.

ಇಡೀ ಸಾಮಾಜಿಕ, ರಾಜಕೀಯ, ಧಾರ್ಮಿಕ ಪರಿಸರವನಲ್ಲ ಪಾವನಗೊಳಿಸಿದ ಶರಣರ ಹಿರಿಮೆಯೇ ಮುಖ್ಯವಾದುದು. ಶರಣರ ಬದುಕಿನ ಸುತ್ತಲೂ ಹೆಣೆದ ಕಥಾಹಂದರವೂ ವಿಶೇಷವಾಗಿ ಹೆಣೆಯಲ್ಪಟ್ಟಿದೆ. ಇಲ್ಲಿಯ ನಾಯಕ ಮೊಲ್ಲೆಬೊಮ್ಮಯ್ಯ ಪ್ರಭುತ್ವದ ವಿರುದ್ಧ ಸಿಡಿದೆದ್ದು ಅರಸನನ್ನೇ ಕೊಲೆಮಾಡಿದ ಕಥೆ ಪ್ರಮುಖವಾಗಿದೆ. ಈ ಕಥೆಗೆ ಪೂರಕವಾಗಿ ಬಸವಣ್ಣ, ಹರಳಯ್ಯ ವಧುವರಸರ ಕಥೆಗಳು ಬಿತ್ತರಗೊಂಡಿವೆ.

ವಚನ ಸಾಹಿತ್ಯ 'ನಿಚ್ಚಂ ಪೊಸತು' ಎಂಬಂತೆ ನಿತ್ಯ ನಿರಂತರ ಪ್ರಸ್ತುತತೆಯನ್ನು ಪಡೆದಿದೆ. ಈ ಕಾವ್ಯ ವಸ್ತುವನ್ನೆ ಆಧರಿಸಿ ಅನೇಕರ ಆಧುನಿಕ ಪ್ರಕಾರಗಳಾದ ಕಥೆ, ನಾಟಕ, ಕಾದಂಬರಿಗಳಾಗಿಯೂ ಹೊರಬಂದಿರುವುದು ಸಂತೋಷವೆನಿಸುತ್ತದೆ. ಹೀಗೆ ಈ ಕಥಾವಸ್ತು ಹಿಂದೆಯೂ ಇದ್ದು. ನವ ವಧುವಿನಂತೆ ಮತ್ತೆ ಮತ್ತೆ ಶೃಂಗಾರಕ್ಕೆ ಒಳಗಾಗುತ್ತದೆ.

**ಕಾವ್ಯ ರಚನೆಯ ತಂತ್ರ**

ಇತಿಹಾಸದ ಚಿತ್ರಣದ ಜೊತೆಗೆ ಕಾವ್ಯ ಒಂದು ತಾತ್ವಿಕ ಚೌಕಟ್ಟಿಗೆ ಒಳಗಾಗಿದೆ. ಶೈವರ ಅನೇಕ ವಿಚಾರಗಳು ಸ್ಥಾನ ಪಡೆದಿದೆ. ಶ್ರಮ, ಸ್ವಾಭಿಮಾನಗಳು ಯಾವಾಗಲೂ ಒತ್ತಡ, ಅವಮಾನಗಳನ್ನು ಸಹಿಸಿಕೊಳ್ಳುವುದಿಲ್ಲ. ಇದಕ್ಕೆ ಪ್ರತಿಕಾರವನ್ನು ತೆಗೆದುಕೊಳ್ಳಲು ಪ್ರಾಣತ್ಯಾಗ ಮಾಡಲು, ಹಾಗೂ ಪ್ರಾಣ

ತೆಗೆಯಲು ಸಿದ್ಧವಾದ ವೀರ ಪ್ರವೃತ್ತಿ ಇಲ್ಲಿದೆ. ಹಿಂಸೆ ಹಿಂಸೆಯನ್ನೆ ಸೃಷ್ಟಿಸುತ್ತದೆಂಬಂತೆ ಬಿಜ್ಜಳನಿಂದ ನಡೆದ ಹಿಂಸೆ ಘೋರರೂಪ ತಾಳುತ್ತದೆ. ಶರಣರು ಅನ್ಯಾಯದ ವಿರುದ್ಧ ಧ್ವನಿ ಎತ್ತಿ, ಅಷ್ಟೇ ಏಕೆ ಕೈಯೆತ್ತಿ ಹಿಂಸೆಯ ಮೂಲಕವೇ ಉತ್ತರ ಕೊಟ್ಟಿದ್ದಾರೆ. ಮಾನವೀಯ ಮೌಲ್ಯ, ಆದರ್ಶವಾಗಿ ಬದುಕಿದ ಶರಣರ ಜೀವನ ಪ್ರಮುಖವಾದುದಾಗಿದೆ.

**೪.೧. ಅಲಂಕಾರ**

ಲೋಕರೂಢಿಗೆ ಮೀರಿದ ಉಕ್ತಿವೈಚಿತ್ರ್ಯವೇ, ಅಲಂಕಾರ. ಕಾವ್ಯದ ಸೊಗಸನ್ನು ಹೆಚ್ಚಿಸಲು ಅಲಂಕಾರನ್ನು ಕವಿಗಳೂ ಬಳಸುತ್ತಾರೆ. ಹಾಗೆಯೇ ಕಾವ್ಯದ ಶಬ್ದಾರ್ಥ ವೈಚಿತ್ರ್ಯವನ್ನು ತಿಳಿಸಲು ಸಹಕಾರಿಯಾಗುತ್ತವೆ. ಒಂದು ಕಾವ್ಯಕ್ಕೆ ಮೆರುಗು ತಂದು ಕೊಡುವ ಕಾರ್ಯವನ್ನು ಅಲಂಕಾರಗಳು ಮಾಡುತ್ತವೆ. ಇಲ್ಲಿ ಕವಿ ಧೂಪದ ರಾಚೇಶನು ತನ್ನ ಕಾವ್ಯಕ್ಕೆ ಸೌಂದರ್ಯವನ್ನು ತಂದು ಕೊಡುವುದಕ್ಕಾಗಿಯೇ ವಿವಿಧ ಅಲಂಕಾರಗಳನ್ನೂ ಬಳಸಿದ್ದಾನೆ. ಸಾಮಾನ್ಯವಾದ ಭಾಷೆಗೆ ಅಲಂಕಾರವು ಸುಂತ್ರಶಕ್ತಿಯನ್ನು ಕೊಡುತ್ತದೆ. ಕವಿಯು ಕಾವ್ಯದ ತುಂಬೆಲ್ಲ ಉಪಮಾಲಂಕಾರ, ರೂಪಕ ಹಾಗೂ ಸಂದೇಹಾಲಂಕಾರಗಳನ್ನು ಬಳಸಿದ್ದಾನೆ. ಅಲಂಕಾರಗಳಲ್ಲೆಲ್ಲ ಅತೀ ಜನಪ್ರೀಯವಾದ ಅಲಂಕಾರ ಉಪಮಾಲಂಕಾರವನ್ನೆ ಕವಿ ಇಲ್ಲಿ ಬಳಸಿದ್ದಾನೆ. ರತಿಯರ ವರ್ಣನೆಯನ್ನು ಮಾಡುವಾಗ, ಸ್ರೀಯರನ್ನು ವರ್ಣಿಸುವಾಗ, ಪ್ರಕೃತಿಯನ್ನು ವರ್ಣಿಸುವಾಗ, ಹೀಗೆ ವಿವಿಧ ಬಗೆಯ ವರ್ಣನೆಗಳಿಗೆಲ್ಲ ಸೂಕ್ತವಾದ ಉಪಮಾನ, ಉಪಮೇಯಗಳನ್ನು ಬಳಸಿದ್ದಾನೆ. ಆತ ಬಳಸಿರುವ ಒಂದು ಉದಾ: ರತಿಯಂತೆ, ನಾಲ್ಮೊಗನ ಸತಿಯಂತೆ ಉರೆಯರುಂ

ಧತಿಯಂತೆ ವಸುಮತಿಯ ಸತಿಯಂತೆ ಉರೆಯರುಂ
ಧತಿಯಂತೆ ವಸುಮತಿಯ ಸತಿಯಂತೆ ಮೇಣುಪಾಂ
ಪತಿಯಂತೆ ರೂಪಿನಿಂ ಜಾಣ್ಮೆಯಿಂ ಪತಿವ್ರತದಿ ಕ್ಷಮೆಯಿಂದ ನಾಲ್ಗುಣಗಳಿಂ
ನುತ ಕಾಮಧೇನುವೊಲು ರೊಹಿಣೇಶ್ವರನಂತೆ
ಅತಿಥಿಗೆಯು (ಬೇಳ್ಪ) ಜನರ್ಗೆ [ಯು] ಕೊಡುವ ಎಡೆಯಲ್ಲಿ
ಅತಿಶಾಂತಿಯಿಂದ ಬೊಮ್ಮಣ್ಣಗೌಡನರ್ಧಾಂಗಿ ಕಲ್ಲಮ್ಮನೆಸೆದಿರ್ದಳು.

ಹೀಗೆ ಕವಿಯು ಒಂದನ್ನು ವರ್ಣಿಸುವ ಸಲುವಾಗಿ ಹಲವಾರು ಹೋಲಿಕೆಗಳನ್ನು ಕೊಡುತ್ತಾನೆ. ಕಲ್ಲಮ್ಮಳು ಹೀಗೆ ಕಾಣುತ್ತಿದ್ದಳೆಂಬುದನ್ನು ಹೇಳಲು ರತಿಯಂತೆ, ಬ್ರಹ್ಮನ ಪತ್ನಿಯಾದ ಸರಸ್ವತಿಯಂತೆ, ಅರುಂಧತಿಯಂತೆ, ರೂಪದಲ್ಲಿ, ಜಾಣ್ಮೆಯಲ್ಲಿ, ಕ್ಷಮೆಯಲ್ಲಿ ಹಾಗೂ ಪತಿವೃತ ಎಂಬ ನಾಲ್ಕು ಗುಣಗಳನ್ನು ಹೊಂದಿದ ಕಲ್ಲಮ್ಮ ಕಾಮದೇನುವಿನಂತೆ ಇದ್ದಳೆಂಬುದನ್ನು ತಿಳಿಸುತ್ತಾನೆ. ಒಂದು ವಸ್ತುವಿಗೆ ಅಥವಾ ಒಬ್ಬನ ನಡತೆಗೆ ಸದೃಶ್ಯವಾದ ಹತ್ತಾರು ಉಪಮೆಗಳು ಕವಿಯ ಪ್ರತಿಭೆಗೆ ಕನ್ನಡಿ ಹಿಡಿದಿವೆ. ಕವಿಯ ಲೋಕಾನುಭವದ ಸ್ಪಷ್ಟ ಚಿತ್ರಣವನ್ನು ನೀಡುತ್ತವೆ. ಹೀಗೆ ಕವಿ ಒಂದಕ್ಕೆ ಒಂದೇ ಹೋಲಿಕೆಯನ್ನು ನೀಡದೇ, ಹಲವಾರು ಹೋಲಿಕೆಗಳನ್ನು ಕೊಡುತ್ತಾ ಹೋಗಿದ್ದಾನೆ. ಇದು ಕವಿಯ ವೈಶಿಷ್ಟ್ಯವನ್ನು

ಸಾರುತ್ತವೆ. ಹಾಗೆಯೇ ಕೆಲವೊಂದು ಕಡೆಗಳಲ್ಲಿ ಉಪಮಾನ, ಉಪಮೇಯಗಳೆಂದು ಹೋಲಿಕೆಯನ್ನು ಕೊಡದೇ ಎರಡೂ ಒಂದೇ ಆದಂತೆಯು ಚಿತ್ರಿಸಿದ್ದಾನೆ. 'ಚಂದ್ರಮುಖಿ', 'ಪೊಂಬಾಳೆದೊಳು'ಗಳು, ಇತ್ಯಾದಿಗಳು ರೂಪಕ ಅಲಂಕಾರಕ್ಕೆ ಉದಾಹರಣೆಗಳಾಗಿವೆ.

ಕಾವ್ಯದಲ್ಲಿ ಕೆಲವೆಡೆಗೆ ಸಂದೇಹಾಲಂಕಾರವನ್ನು ಬಳಸಿದ್ದಾನೆ. ಒಂದು ವಿಷಯುವನ್ನು ಸಂದೇಹಾತ್ಮಕವಾಗಿಯೇ ವಿವರಣೆಯನ್ನು ನೀಡುತ್ತಾ ಸಾಗುತ್ತಾನೆ.

ಮುಕ್ತಿಯ ಬೀಡೋ ಸಕಲ ಲೋಕದ ಹೂ
ನ್ಯೋಕ್ತಿಯ ಗೂಡೋ ಮಾಯೆಯನುಳಿದ ವಿ
ರಕ್ತಿಯ ಹೂಂಟೋ ತ್ರಿಭುವನಂಗಳ ಸತ್ಕೀರ್ತಿಯ ಗುಂಪೋ
ಭಕ್ತಿಯ ಬಲವೋ ಅಭವನ ಜ್ಞಾನದ
ಶಕ್ತಿಗಳೊಲವೋ ಸೂವ್ರತರೆನಿಸುವ
ಮುಕ್ತದ ಕಡಲೋ ಅಖಿಳ ಕಮಲ ಜಾಂಡಂಗಳ ಪಡೆದೊಳಲೊ (೧೬-೫೭)

ಹೀಗೆ ಬೀಡೋ, ಗೂಡೋ, ಹೂಂಟೇ, ಗುಂಪೋ, ಬಲವೋ ಒಲವೋ, ಕಡಲೋ, ಒಡಲೋ ಹಲವಾರು ಸಂದೇಹವನ್ನು ವ್ಯಕ್ತಪಡಿಸುವ ಅಲಂಕಾರವನ್ನು ಬಳಸಿದ್ದಾನೆ. ಈ ಅಲಂಕಾರಗಳ ಬಳಕೆಯಲ್ಲಿ ಕವಿಯು ಸ್ವಪ್ರತಿಭೆಯನ್ನು ಮೆರೆದಿದ್ದಾನೆ. ಇಲ್ಲಿ ಬಳಸಿರುವ ಅಲಂಕಾರಗಳು ಸಹೃದಯರನ್ನು ಆಕರ್ಷಿಸುತ್ತವೆ. ಇಲ್ಲಿ ಬಳಸಿದ ಉಪಮೇಯಗಳಲ್ಲಿ ಸೊಗಸಾದ ಸೌಮ್ಯ, ಸಾದೃಶ್ಯ ಕಂಡು ಬರುತ್ತದೆ. ಹೀಗೆ ಕವಿಯು ಕಾವ್ಯ ಸೌಂದರ್ಯವನ್ನು ಹೆಚ್ಚಿಸುವುದಕ್ಕಾಗಿ ಅಲಂಕಾರಗಳನ್ನು ಬಳಸಿದ್ದಾನೆ.

ಹಾಗೆಯೇ ಕವಿ ತನ್ನ ಕಾವ್ಯದ ಚೆಲುವನ್ನು ಹೆಚ್ಚಿಸಲು ಅಲ್ಲಲ್ಲಿ ದ್ವಿರುಕ್ತಿ, ಪ್ರಾಸ, ವಿಭಕ್ತಿಪ್ರತ್ಯಯ, ವಡಿ, ಇತ್ಯಾದಿಗಳನ್ನು ಬಳಸಿದ್ದಾನೆ. ಹಂಸಮಂ ಹಂಸಮಂ, ಪದ್ಮಮಂ, ಪದ್ಮಮಂ ಭ್ರಮರಮಂ ಭ್ರಮರಮಂ, ಬಿಂಬಮಂಬಿಂಬಮಂ ಇತ್ಯಾದಿ ದ್ವಿರುಕ್ತಿಯನ್ನು ಹಾಗೂ ಆದಿಪ್ರಾಸವನ್ನು ನಿಯತವಾಗಿ ಕಾವ್ಯದ ತುಂಬೆಲ್ಲ ಬಳಸಿದ್ದಾನೆ.

### ೪.೨. ಛಂದಸ್ಸು, ವ್ಯಾಕರಣ

ಕವಿಯು ಕಾವ್ಯ ರಚಿಸುವ ಸಂದರ್ಭ ತಾನು ಬಳಸಿದ ಗಣ, ವಡಿ, ಸಪ್ತವಿಭಕ್ತಿ, ಶಬ್ದ, ಪ್ರಾಸ, ರಸ, ಚಿತ್ರಾರ್ಥ, ಯಮಕ, ಗಮಕದ ವಿಲಾಸ, ಎಲ್ಲವನ್ನು ಯಾವ ರೀತಿ ಬಳಕೆ ಮಡಿಕೊಂಡಿದ್ದಾನೆಂಬುದನ್ನು ಹೇಳುತ್ತಾನೆ. ಇಲ್ಲಿ ಕವಿ ಚಾತುರ್ಯ, ಕವಿಯ ಪ್ರತಿಭೆ ಹೊರಹೊಮ್ಮಿದೆ.

ಉಸಿರವೆ ಸೂಲಕ್ಷಣದಿಂ ಗಣದಿಂ
ಪೊಸ ಸಸಿಜಾಂಘಳನುಡಿಯಿಂ ವಡಿಯಿಂ
ಮಿಸುಕದ ಸಪ್ತ ವಿಭಕ್ತಿ (ಯ)ಯುಕ್ತಿಯ ಗತಿಯಿಂ ಪದ್ಧತಿಯಿಂ

ಎಸಕದ ಶಬ್ದ ಸುಭಾಷ್ಯದಿ ಪ್ರಾಸಿಂ
ರಸ ಚಿತ್ರಾರ್ಥಭಿರಾಮದಿ ನೇಮದಿ
ಕುಶಲತೆ ಭಾವದಿ ಯಮಕದ ಗಮಕದ ವಿಳಾಸದೆಸುಗೆಯಲ್ಲಿ (೧-೧೭)

ಕವಿ ತನ್ನನ್ನು ತಾನು ಶರಣರ 'ಕಿಂಕರ' ಎಂಬುದಾಗಿ ಕರೆದುಕೊಂಡಿದ್ದಾನೆ. ಶರಣರ ಕಿಂಕರನಾದ ನಾನು ಈ ಎಲ್ಲಾ ಲಕ್ಷಣಗಳನ್ನು ಹೊಂದಿದ ಕಾವ್ಯವನ್ನು ಹೇಳುತ್ತೇನೆ ಎನ್ನುತ್ತಾನೆ. ಓದುಗಬ್ಬವಾಗಿದ್ದ ಕಾವ್ಯಗಳು, ಹಾಡುಗಬ್ಬವಾಗಿ ಪರಿವರ್ತನೆಗೊಳ್ಳುತ್ತಿರುವ ಕಾಲವದು. ಹೀಗಾಗಿ ಕವಿಧೂಪದ ರಾಚೇಶನು 'ಗಮಕದ' ಶೈಲಿಯಲ್ಲಿ ಕಾವ್ಯ ರಚಿಸಿದ್ದಾನೆ. ಅಂದು 'ಗಮಕಿ' ಅಂದರೆ ಹಾಡುವವರು ಇದ್ದರೆಂಬುದಾಗಿಯೂ ಹೇಳುತ್ತಾನೆ.

ಕವಿಗಳ ಕಂಠಾಭರಣವು ಗಮಕಿಯ
ಸವಿಸಂತೋಷದ ಕರಣವು ಮೇಣ್ ವಾ
ದಿವಿದ ಚಕೋರ್ವಿದ ಕಿರಣಾ ಸಂತತ ವಾಗ್ಮೀಕಿಯ ಹೃದಯ
ಭುವನ ಜನ ವಿಕಸಿದ ತರುಣಿಯ ಕೇಳ್ವರ
ತವೆಯಕ್ಕರ ಸಿರಿಧರಣಿಯ ಭಕ್ತರ
ಹವಣಿಸಿ ಮುಕ್ತಿಯ ಸರಣಿಯುಮೆಂದೆನಿನೆರ್ಕುವುದೀ ಕಾವ್ಯ (೧-೧೮)

ಹೀಗೆ ಹಾಡುವ ಉದ್ದೇಶಕ್ಕಾಗಿಯೇ ಕಾವ್ಯವನ್ನು ಸರಳಗೊಳಿಸಿದ್ದಾನೆ. ಮಹಾಕಾವ್ಯಗಳನ್ನು ಜನಸಾಮಾನ್ಯರು ಅರ್ಥ ಮಾಡಿಕೊಳ್ಳುವುದು ಸುಲಭವಲ್ಲ. ಗಮಕಿಗಳು ಸುಶ್ರಾವ್ಯವಾಗಿ ಹಾಡುವದರ ಮೂಲಕ ಮಹಾಕಾವ್ಯಗಳನ್ನು ಸಮಾಜದ ಎಲ್ಲಾ ವರ್ಗದವರಿಗೂ ತಲುಪುವಂತೆ ಮಾಡಿದರು. ಹಿಂದಿನಿಂದಲೂ ಕವಿಗಳು ತಮ್ಮ ಆತ್ಮ ಸಂತೋಷಕ್ಕಾಗಿಯೇ ಬರೆದರು. ಆದರೆ ಹೀಗೆ ಬರೆಯಲ್ಪಟ್ಟ ಮಹಾಕಾವ್ಯಗಳು ವಿದ್ವಾಂಸರಿಗಷ್ಟೇ ಸೀಮಿತವಾಗದೇ, ಅನಕ್ಷರಸ್ಥರಲ್ಲೂ ಜನಪ್ರಿಯಗೊಳಿಸುವಲ್ಲಿ 'ಗಮಕಕಲೆ' ಮಹತ್ತರವಾದ ಪಾತ್ರ ವಹಿಸುತ್ತದೆ. ನಡುಗನ್ನಡ ಕಾವ್ಯಘಟ್ಟದಲ್ಲಿ ಹಲವಾರು ದೇಶಿಯ ಕಾವ್ಯಗಳು ಹುಟ್ಟಿಕೊಂಡವು. ನಮ್ಮ ದೇಶಿಯ ಕಾವ್ಯಗಳಲ್ಲೆಲ್ಲ 'ಲಯ'ಕ್ಕೆ ಪ್ರಾಧಾನ್ಯತೆ ಇದೆಯೇ, ಹೊರತು, ಮಾತ್ರೆಗಲ್ಲ. ಹೀಗಾಗಿಯೇ ಕವಿ ವಿವಿಧ ವಿನ್ಯಾಸದ ಷಟ್ಪದಿಗಳನ್ನು ವೈವಿದ್ಯಮಯವಾಗಿ ಬಳಸಿದ್ದಾನೆ. ಗಮಕ ಎಂಬುದು ವೈವಿದ್ಯಪೂರ್ಣವಾದ ಹಾಡು ಮೌಖಿಕ ಪರಂಪರೆಗೆ ಹೆಚ್ಚು ಹತ್ತಿರವಾದುದಾಗಿದೆ. ಏಕತಾನತೆಯನ್ನು ತಪ್ಪಿಸುವ ಸಲುವಾಗಿಯೇ ಗಮಕಿಗಳ ಹಾಡಿನ ವೈವಿದ್ಯತೆಗಾಗಿಯೇ ಭಿನ್ನ ಭಿನ್ನ ಷಟ್ಪದಿಯನ್ನು ಬಳಸಿದ್ದಾನೆ. ಹೀಗೆ ಆಡುಮಾತಿನ ಪ್ರಕಾರವೊಂದನ್ನು ಉನ್ನತ ಮಟ್ಟಕ್ಕೇರಿಸಿದ ಕೀರ್ತಿ ಶರಣರಿಗಿದೆ. ದೇಶಿಯತೆಯ ಬಳಕೆಯಿಂದಾಗಿ ಕಾವ್ಯವೂ ಓದಿಸಿಕೊಂಡು ಹೋಗುತ್ತದೆ. ಹಾಗೂ ಓದುಗರನ್ನು ಆಕರ್ಷಿಸುತ್ತದೆ.

ಕವಿರಾಜಮಾರ್ಗಕಾರನು 'ದೇಸಿ ಬೇರೆ ಬೇರೆ ಅಪ್ಪುದರಿಂ ವಾಸುಗಿಯುಂ ಬೇರೆಗಂ' ಎನ್ನುತ್ತಾನೆ. ಅಂದು ಕನ್ನಡದಲ್ಲಿರಬಹುದಾದ ಪ್ರಾದೇಶಿಕ ವೈಲಕ್ಷಣಗಳನ್ನು ಸೂಚಿಸುತ್ತವೆ. ನಡುಗನ್ನಡ ಕಾಲದ

ಜನಪ್ರಿಯ ಷಟ್ಪದಿಗಳಾದ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕಗಳೆಂಬ ಷಟ್ಪದಿಗಳ ಬಳಕೆ ಸಾಮಾನ್ಯವಾಗಿದ್ದಿತು. ಜನಪ್ರಿಯ ದೇಶಿಯ ಛಂದಸ್ಸನ್ನೆ ಕವಿ ಇಲ್ಲಿ ಬಳಸಿದ್ದಾನೆ.

ಕನ್ನಡ ಛಂದಸ್ಸಿನ ಮಹತ್ತರ ಸಿದ್ಧಿಯಾದ ಷಟ್ಪದಿಯು ೧೮ನೇ ಶತಮಾನದವರೆಗೂ 'ವರ್ಣಕಕಾವ್ಯದ ಮಾಧ್ಯಮ'ವಾಗಿ ತನ್ನದೊಂದು ಸಾಮ್ರಾಜ್ಯವನ್ನು ಸ್ಥಾಪಿಸಿತು. ಇದರಿಂದಲೇ ಪ್ರೇರಣೆಗೊಂಡ ಕವಿಧೂಪದ ರಾಚೇಶನು ಭಾವ, ಅಭಿವ್ಯಕ್ತಿಗೆ ಸರಿಹೊಂದುವ ಷಟ್ಪದಿಯನ್ನೆ ಬಳಸಿದ್ದಾನೆ. ಐತಿಹಾಸಿಕವಾಗಿ ಇಂಥ ಬದಲಾವಣೆಯಾದದ್ದು ಮಹತ್ಯಪೂರ್ಣವಾದುದು. ಮುಂದೆ ಬಂದ ಕವಿಗಳೆಲ್ಲ ರಾಘವಾಂಕನ ಕಥನ ಶೈಲಿಯನ್ನೆ ಬಳಸಿದ್ದಾರೆ. ಇಲ್ಲಿ ಕವಿಯು ಕನ್ನಡದ ನೈಜ ಸತ್ವವನ್ನು ಸಹಜ ಛಂದೋಲಯಗಳನ್ನು ಪ್ರಯೋಗಿಸಿದ್ದಾನೆ.

ಕವಿಯು ಪ್ರತಿ ಸಂಧಿಯ ಪ್ರಾರಂಭದಲ್ಲಿ 'ಅರ್ಧ ಷಟ್ಪದಿ'ಯನ್ನು ಬಳಸಿದ್ದಾನೆ 'ಅರ್ಧ ಷಟ್ಪದಿಯು' ಇಡೀ ಸಂಧಿಯು ಒಳಗೊಂಡಿರುವ ವಿಷಯವನ್ನು ಸಂಕ್ಷಿಪ್ತವಾಗಿ ವಿವರಿಸುತ್ತದೆ.

**ಒಂದನೆಯ ಸಂಧಿ**

೧ನೇ ಪದ್ಯದಿಂದ ೫ರವರೆಗೆ – ವಾರ್ಧಕ ಷಟ್ಪದಿ

೬ನೇ ಪದ್ಯದಿಂದ ೧೪ರವರೆಗೆ – ಭಾಮಿನಿ ಷಟ್ಪದಿ

೧೫ನೇ ಪದ್ಯದಿಂದ ೧೯ರವರೆಗೆ – ಪರಿವರ್ಧಿನಿ ಷಟ್ಪದಿ

೨೦ನೇ ಪದ್ಯದಿಂದ ೫೧ರವರೆಗೆ – ವಾರ್ಧಕ ಷಟ್ಪದಿ

ಷಟ್ಪದಿಗಳ ಬಳಕೆ ಕಂಡು ಬರುತ್ತದೆ.

**ಎರಡನೆಯ ಸಂಧಿ**

೧ನೇ ಪದ್ಯದಿಂದ ೧೦ರವರೆಗೆ – ಭಾಮಿನಿ ಷಟ್ಪದಿ

೧೧ನೇ ಪದ್ಯದಿಂದ ೧೭ರವರೆಗೆ – ವಾರ್ಧಕ ಷಟ್ಪದಿ

೧೮ನೇ ಪದ್ಯದಿಂದ ೨೯ರವರೆಗೆ – ಪರಿವರ್ಧಿನಿ ಷಟ್ಪದಿ

೩೦ನೇ ಪದ್ಯದಿಂದ ೪೨ರವರೆಗೆ – ಭಾಮಿನಿ ಷಟ್ಪದಿ

೪೩ನೇ ಪದ್ಯದಿಂದ ೬೬ರವರೆಗೆ – ವಾರ್ಧಕ ಷಟ್ಪದಿ

**ಮೂರನೆಯ ಸಂಧಿ**

೧ನೇ ಪದ್ಯದಿಂದ ೧೨ರವರೆಗೆ – ಭಾಮಿನಿ ಷಟ್ಪದಿ

೧೩ನೇ ಪದ್ಯದಿಂದ ೨೨ರವರೆಗೆ – ವಾರ್ಧಕ ಷಟ್ಪದಿ

೨೩ನೇ ಪದ್ಯದಿಂದ ೩೨ರವರೆಗೆ – ಪರಿವರ್ಧಿನಿ ಷಟ್ಪದಿ

೩೩ನೇ ಪದ್ಯದಿಂದ ೩೮ರವರೆಗೆ – ವಾರ್ಧಕ ಷಟ್ಪದಿ

೩೯ನೇ ಪದ್ಯದಿಂದ ೫೩ರವರೆಗೆ – ಪರಿವರ್ಧಿನಿ ಷಟ್ಪದಿ

೫೪ನೇ ಪದ್ಯದಿಂದ ೬೩ರವರೆಗೆ – ಭಾಮಿನಿ ಷಟ್ಪದಿ

**ನಾಲ್ಕನೆಯ ಸಂಧಿ**

೧ನೇ ಪದ್ಯದಿಂದ ೨೦ರ ವರೆಗೆ – ವಾರ್ಧಕ ಷಟ್ಪದಿ

೨೧ನೇ ಪದ್ಯದಿಂದ ೨೯ರ ವರೆಗೆ – ಪರಿವರ್ಧಿನಿ ಷಟ್ಪದಿ

೩೦ನೇ ಪದ್ಯದಿಂದ ೩೬ರ ವರೆಗೆ – ಭಾಮಿನಿ ಷಟ್ಪದಿ

೩೭ನೇ ಪದ್ಯದಿಂದ ೪೯ರ ವರೆಗೆ – ವಾರ್ಧಕ ಷಟ್ಪದಿ

೫೦ನೇ ಪದ್ಯದಿಂದ ೬೨ರ ವರೆಗೆ – ಭಾಮಿನಿ ಷಟ್ಪದಿ

**ಐದನೆಯ ಸಂಧಿ**

೧ನೇ ಪದ್ಯದಿಂದ ೬ರ ವರೆಗೆ – ಭಾಮಿನಿ ಷಟ್ಪದಿ

೭ನೇ ಪದ್ಯದಿಂದ ೨೬ರ ವರೆಗೆ – ವಾರ್ಧಕ ಷಟ್ಪದಿ

೨೭ನೇ ಪದ್ಯದಿಂದ ೩೨ರ ವರೆಗೆ – ಪರಿವರ್ಧಿನಿ ಷಟ್ಪದಿ

೩೩ನೇ ಪದ್ಯದಿಂದ ೫೨ರ ವರೆಗೆ – ವಾರ್ಧಕ ಷಟ್ಪದಿ

**ಆರನೆಯ ಸಂಧಿ**

೧ನೇ ಪದ್ಯದಿಂದ ೧೪ರ ವರೆಗೆ – ಭಾಮಿನಿ ಷಟ್ಪದಿ

೧೫ನೇ ಪದ್ಯದಿಂದ ೨೧ರ ವರೆಗೆ – ಪರಿವರ್ಧಿನಿ ಷಟ್ಪದಿ

೨೨ನೇ ಪದ್ಯದಿಂದ ೪೫ರ ವರೆಗೆ – ವಾರ್ಧಕ ಷಟ್ಪದಿ

೪೬ನೇ ಪದ್ಯದಿಂದ ೫೧ರ ವರೆಗೆ – ಭಾಮಿನಿ ಷಟ್ಪದಿ

೫೨ನೇ ಪದ್ಯದಿಂದ ೫೩ರ ವರೆಗೆ – ವಾರ್ಧಕ ಷಟ್ಪದಿ

**ಏಳನೆಯ ಸಂಧಿ**

೧ನೇ ಪದ್ಯದಿಂದ ೭ರ ವರೆಗೆ – ವಾರ್ಧಕ ಷಟ್ಪದಿ

೮ನೇ ಪದ್ಯದಿಂದ ೨೪ರ ವರೆಗೆ – ಪರಿವರ್ಧಿನಿ ಷಟ್ಪದಿ

೨೫ನೇ ಪದ್ಯದಿಂದ ೪೭ರ ವರೆಗೆ – ವಾರ್ಧಕ ಷಟ್ಪದಿ

೪೮ನೇ ಪದ್ಯದಿಂದ ೫೩ರ ವರೆಗೆ – ಪರಿವರ್ಧಿನಿ ಷಟ್ಪದಿ

೫೪ನೇ ಪದ್ಯದಿಂದ ೬೦ರ ವರೆಗೆ – ವಾರ್ಧಕ ಷಟ್ಪದಿ

**ಎಂಟನೆಯ ಸಂಧಿ**

೧ನೇ ಪದ್ಯದಿಂದ ೮ರ ವರೆಗೆ – ಭಾಮಿನಿ ಷಟ್ಪದಿ

೯ನೇ ಪದ್ಯದಿಂದ ೧೮ರ ವರೆಗೆ – ಪರಿವರ್ಧಿನಿ ಷಟ್ಪದಿ

೧೯ನೇ ಪದ್ಯದಿಂದ ೪೨ರ ವರೆಗೆ – ವಾರ್ಧಕ ಷಟ್ಪದಿ

೪೩ನೇ ಪದ್ಯದಿಂದ ೫೮ರ ವರೆಗೆ – ಭಾಮಿನಿ ಷಟ್ಪದಿ

**ಒಂಬತ್ತನೆಯ ಸಂಧಿ**

೧ನೇ ಪದ್ಯದಿಂದ ೧೦ರ ವರೆಗೆ – ಪರಿವರ್ಧಿನಿ ಷಟ್ಪದಿ

೧೧ನೇ ಪದ್ಯದಿಂದ ೨೮ರ ವರೆಗೆ – ವಾರ್ಧಕ ಷಟ್ಪದಿ

೨೯ನೇ ಪದ್ಯದಿಂದ ೩೮ರ ವರೆಗೆ – ಭಾಮಿನಿ ಷಟ್ಪದಿ

೩೯ನೇ ಪದ್ಯದಿಂದ ೪೭ರ ವರೆಗೆ – ಪರಿವರ್ಧಿನಿ ಷಟ್ಪದಿ

೪೮ನೇ ಪದ್ಯದಿಂದ ೫೪ರ ವರೆಗೆ – ವಾರ್ಧಕ ಷಟ್ಪದಿ

**ಹತ್ತನೆಯ ಸಂಧಿ**

೧ನೇ ಪದ್ಯದಿಂದ ೩೪ರ ವರೆಗೆ – ವಾರ್ಧಕ ಷಟ್ಪದಿ

೩೫ನೇ ಪದ್ಯದಿಂದ ೩೯ರ ವರೆಗೆ – ಪರಿವರ್ಧಿನಿ ಷಟ್ಪದಿ

೪೦ನೇ ಪದ್ಯದಿಂದ ೬೪ರ ವರೆಗೆ – ವಾರ್ಧಕ ಷಟ್ಪದಿ

**ಹನ್ನೊಂದನೆಯ ಸಂಧಿ**

೧ನೇ ಪದ್ಯದಿಂದ ೬ರ ವರೆಗೆ – ಪರಿವರ್ಧಿನಿ ಷಟ್ಪದಿ

೭ನೇ ಪದ್ಯದಿಂದ ೧೯ರ ವರೆಗೆ – ವಾರ್ಧಕ ಷಟ್ಪದಿ

೨೦ನೇ ಪದ್ಯದಿಂದ ೨೫ರ ವರೆಗೆ – ಭಾಮಿನಿ ಷಟ್ಪದಿ

೨೬ನೇ ಪದ್ಯದಿಂದ ೪೩ರ ವರೆಗೆ – ವಾರ್ಧಕ ಷಟ್ಪದಿ

೪೪ನೇ ಪದ್ಯದಿಂದ ೫೨ರ ವರೆಗೆ – ಪರಿವರ್ಧಿನಿ ಷಟ್ಪದಿ

೫೩ನೇ ಪದ್ಯದಿಂದ ೫೭ರ ವರೆಗೆ – ವಾರ್ಧಕ ಷಟ್ಪದಿ

**ಹನ್ನೆರಡನೆಯ ಸಂಧಿ**

೧ನೇ ಪದ್ಯದಿಂದ ೩೧ರ ವರೆಗೆ –ವಾರ್ಧಕ ಷಟ್ಪದಿ

೩೨ನೇ ಪದ್ಯದಿಂದ ೪೪ರ ವರೆಗೆ – ಭಾಮಿನಿ ಷಟ್ಪದಿ

೪೫ನೇ ಪದ್ಯದಿಂದ ೬೮ರ ವರೆಗೆ – ಪರಿವರ್ಧಿನಿ ಷಟ್ಪದಿ

**ಹದಿಮೂರನೆಯ ಸಂಧಿ**

೧ನೇ ಪದ್ಯದಿಂದ ೩೨ರ ವರೆಗೆ – ವಾರ್ಧಕ ಷಟ್ಪದಿ

೩೩ನೇ ಪದ್ಯದಿಂದ ೪೮ರ ವರೆಗೆ – ಪರಿವರ್ಧಿನಿ ಷಟ್ಪದಿ

೪೯ನೇ ಪದ್ಯದಿಂದ ೫೪ರ ವರೆಗೆ – ಭಾಮಿನಿ ಷಟ್ಪದಿ

೫೫ನೇ ಪದ್ಯದಿಂದ ೬೨ರ ವರೆಗೆ – ವಾರ್ಧಕ ಷಟ್ಪದಿ

**ಹದಿನಾಲ್ಕನೆಯ ಸಂಧಿ**

೧ನೇ ಪದ್ಯದಿಂದ ೨೧ರ ವರೆಗೆ – ವಾರ್ಧಕ ಷಟ್ಪದಿ

೨೨ನೇ ಪದ್ಯದಿಂದ ೩೬ರ ವರೆಗೆ – ಪರಿವರ್ಧಿನಿ ಷಟ್ಪದಿ

೩೭ನೇ ಪದ್ಯದಿಂದ ೪೮ರ ವರೆಗೆ – ಭಾಮಿನಿ ಷಟ್ಪದಿ

೪೯ನೇ ಪದ್ಯದಿಂದ ೬೫ರ ವರೆಗೆ – ವಾರ್ಧಕ ಷಟ್ಪದಿ

**ಹದಿನೈದನೆಯ ಸಂಧಿ**

೧ನೇ ಪದ್ಯದಿಂದ ೧೧ರ ವರೆಗೆ – ಭಾಮಿನಿ ಷಟ್ಪದಿ

೧೨ನೇ ಪದ್ಯದಿಂದ ೨೬ರ ವರೆಗೆ – ಪರಿವರ್ಧಿನಿ ಷಟ್ಪದಿ

೨೭ನೇ ಪದ್ಯದಿಂದ ೬೩ರ ವರೆಗೆ – ವಾರ್ಧಕ ಷಟ್ಪದಿ

**ಹದಿನಾರನೆಯ ಸಂಧಿ**

೧ನೇ ಪದ್ಯದಿಂದ ೧೨ರ ವರೆಗೆ – ಭಾಮಿನಿ ಷಟ್ಪದಿ

೧೩ನೇ ಪದ್ಯದಿಂದ ೨೭ರ ವರೆಗೆ – ವಾರ್ಧಕ ಷಟ್ಪದಿ

೨೮ನೇ ಪದ್ಯದಿಂದ ೩೫ರ ವರೆಗೆ – ಭಾಮಿನಿ ಷಟ್ಪದಿ

೩೬ನೇ ಪದ್ಯದಿಂದ ೫೦ರ ವರೆಗೆ – ವಾರ್ಧಕ ಷಟ್ಪದಿ

೫೧ನೇ ಪದ್ಯದಿಂದ ೬೪ರ ವರೆಗೆ – ಪರಿವರ್ಧಿನಿ ಷಟ್ಪದಿ

**ಹದಿನೇಳನೆಯ ಸಂಧಿ**

೧ನೇ ಪದ್ಯದಿಂದ ೪೫ರ ವರೆಗೆ – ವಾರ್ಧಕ ಷಟ್ಪದಿ

೪೬ನೇ ಪದ್ಯದಿಂದ ೮೫ರ ವರೆಗೆ – ಭಾಮಿನಿ ಷಟ್ಪದಿ

ಹೀಗೆ ಕವಿಯು ವೈವಿಧ್ಯಮಯವಾಗಿ ಕಾವ್ಯಸೌಂದರ್ಯವನ್ನು ಹೆಚ್ಚಿಸಲು ಮೂರು ಬಗೆಯ ಷಟ್ಪದಿಗಳ ಸಮ್ಮಿಶ್ರ ಮಾಡಿದ್ದಾನೆ. ತಾನು ಹೇಳುವ ವಿಷಯಕ್ಕೆ ಯಾವುದೇ ದಕ್ಕೆ ಬರದಂತೆ ಕಾವ್ಯ ಸರಾಗವಾಗಿ ಹಾಡುವಂತೆ ಸರಳವಾಗಲು ಈ ಬಗೆಯ ಭಿನ್ನತೆಯನ್ನು ಕವಿ ಬಳಸಿದ್ದಾನೆ ತನ್ನ ಕಲಾ ಪ್ರೌಢಿಮೆಯನ್ನು ಮೆರೆಯಲು ಹಾಗೂ ಕಾವ್ಯವನ್ನು ಸರಳಗೊಳಿಸುವ ಉದ್ದೇಶದಿಂದ ಈ ರೀತಿಯ ಭಿನ್ನತೆಯನ್ನು ಬಳಸಿದ್ದಾನೆಂಬುದು ಸ್ಪಷ್ಟವಾಗುತ್ತದೆ.

**ಭಾಮಿನಿ ಷಟ್ಪದಿಯ ಉದಾ:**

– U  – U U  – U – U U
ಮೂರು ಲೋಕದೊ ಳೆಲ್ಲ ಕಾವನ

– U  U U –  – U  U U U U
ಚಾರು ತರಮಂ ಕಂಡೆ ಪತಿವ್ರತ

– U  – U U  U U U  U U U U – U U U –  –
ನಾರಿ ಯರ್ಗಳು ಭ್ರಮೆಗೊ ಳುತಲಿರ ಲೆಚ್ಚನೆವದಿಂ ದ

– U U U –  U U U – U U
ಕೂರಿ ಕಿನಿಸಿಂ ಮದನ ನಂಗವ

– U U U U U  U U U U U U  U
ಘೋರ ನುರಿಪಿಯು ಭಸಿತ ಮುಮನು ಶ

– U  U U  U U  U U U  U U – – U  – –  –
ರೀರ ದೊಳೆ ತೊಡೆ ದಭವ ಪೊರೆಗೆಮ್ಮಿಷ್ಟ ಮನ್ನಿ ತ್ತು

ಹೀಗೆ ಷಟ್ಪದಿಯಲ್ಲೆಲ್ಲ ತುಂಬಾ ಜನಪ್ರಿಯವಾದ ಭಾಮಿನಿ ಷಟ್ಪದಿಯನ್ನಿಲ್ಲಿ ಬಳಸಿದ್ದಾನೆ. ಈ ಪದ್ಯದ ಒಟ್ಟು ಆಶಯ ೧–೨ ಮತ್ತು ೪–೫ ನೇಯ ಪಾದಗಳಲ್ಲಿ ಪ್ರತಿಯೊಂದರಲ್ಲೂ ೧೪ ಮಾತ್ರೆಗಳು (೩.೪x೨); ೩–೬ನೇಯ ಪಾದಗಳಲ್ಲಿ, ಪ್ರತಿಯೊಂದರಲ್ಲಿಯೂ ೨೧ ಮಾತ್ರೆಗಳು ಮತ್ತು ಒಂದು ಗುರು (೩.೪x೩+೨). ಕವಿ ತನ್ನ ಕಲಾಚಾತುರ್ಯದಿಂದ ಗಣ ವೈವಿಧ್ಯವನ್ನು ನಿರ್ವಹಿಸಿದ್ದಾನೆ. ಲಯವೈವಿಧ್ಯವನ್ನು ಸಾಧಿಸುವುದೇ, ಈ ಗಣಕೂಟಗಳ ಕಾರ್ಯವಾಗಿದೆ. ಗಮಕಿಗಳು ಒಪ್ಪುವ ರಾಗ–ತಾಳಗಳನ್ನು ಸ್ಥೂಲವಾಗಿ ಸಂಯೋಜಿಸಿ, ಪದ್ಯಗಳನ್ನು ಹಾಡಲು ಇವು ಅನುಕೂಲವಾಗಿವೆ.

ನಡುಗನ್ನಡ ಸಾಹಿತ್ಯದಲ್ಲಿ ಕೃತಿ ರಚನೆಗೆ ಬಳಸಿದ ಛಂದಸ್ಸುಗಳಲ್ಲೆಲ್ಲ ಭಾಮಿನಿ ಷಟ್ಪದಿಯೇ ಮೊದಲ ಸ್ಥಾನದಲ್ಲಿ ನಿಂತಿರುವದು ನಮಗೆಲ್ಲ ತಿಳಿದ ಸಂಗತಿ. ಕವಿ ಧೂಪದ ರಾಚೇಶ ತನ್ನ ಕೃತಿ ರಚನೆಯಲ್ಲಿ ಮಿಶ್ರ ಷಟ್ಪದಿಗಳನ್ನು ಬಳಸಿದ್ದಾನೆ. ಧೂಪದ ರಾಚೇಶನಂತೆಯೇ ಮಿಶ್ರಷಟ್ಪದಿಯನ್ನು ಬಳಸಿದ ಕವಿಗಳು

ಅನೇಕ. ಅವರಲ್ಲಿ ಕುವಾರ ಪದ್ಮರಸ (ಸು.೧೨೬೦), ಕುಮುದೇಂದು(ಸು.೧೨೭೫), ಕಲ್ಯಾಣಕೀರ್ತಿ(ಸು.೧೪೩೯), ಚೆನ್ನಬಸವಾಂಕ (ಸು.೧೫೫೦), ಸಾಳ್ವ (ಸು.೧೫೫೦), ನಾರಸಿಂಹ(ಸು.೧೭೬೮), ಧೂಪದ ರಾಚೇಶ(ಸು.೧೭೦೦) ಹೀಗೆ ಅನೇಕ ಕವಿಗಳು ಮಿಶ್ರಷಟ್ಪದಿಯನ್ನು ಬಳಸಿದ್ದಾರೆ.

**ವಾರ್ಧಿಕ ಷಟ್ಪದಿ ಉದಾ:**

U U U – – – U – – U U U U U U
ಮೊಗವು ಸೀತಾಂಭೋಜಮನ್ನೇಳಿಸಿತು ಶರಣ

U U U – –U – U U – U –U U U U
ಪಗೆಯಹಾ ಬಿಜ್ಜಳಂಗತಿ ಕೇಡು ಬರ್ಪುದಕೆ

U U–U – U U U – U – U U U U U U U – U U U U U–
ಮಿಗಿಲೆದ್ದು ಸೂಚನೆಯ ಧೂಮಕೇತುವಿನವೊಲು ಮಣಿಗಾಂಚಿಘಟೆಯೊಳಗೆ

U U U U U – U – U U U U U U U– U
ನಿಗಮ ಮೊಗ ಮೋಹನಾಂಬುವನೆರೆದು ಸಲಹಲ್ಕೆ

U U U – U U U – U U U U – U U U
ಒಗೆದು ರಾಜಿಸುವ ತಾಮಲಲತೆಯೆಂಬವೊಲು

U U U U U U U –U U U U– U U– U – – U U U – U
ಸೊಗಸಿದುದು ಪೊಸತಾಗಿ ಮುರಿದಡೆರ್ಧೆಳೆವಾಸೆಯಾಮಾನಿನಿಯ ಪೊರ್ದಿ

**ನಿಯಮ :** ೧,೨ ಮತ್ತು ೪,೫ನೆಯ ಪಾದಗಳಲ್ಲಿ ಪ್ರತಿಪಾದದಲ್ಲೂ ೨೦ ಮಾತ್ರೆಗಳು (೫x೪), ೩,೬ ಪಾದಗಳಲ್ಲಿ ಪ್ರತಿಪಾದದಲ್ಲೂ ೩೦ ಮಾತ್ರೆಗಳು ಮತ್ತು ಒಂದು ಗುರು (೫x೬+೨)

ದೇಶಿಯ ಛಂದಸ್ಸನ್ನು ಕವಿ ಬಳಸಿರುವದರಿಂದ ಹಾಡಿನ ಗೇಯತೆಗೆ ಕೊರತೆ ಬರದಂತೆ, ಮಾತ್ರೆಗಳಲ್ಲಿ ವ್ಯತ್ಯಾಸ ತಂದಿದ್ದಾನೆ. 'ಮಾತ್ರೆ' ತನ್ನ ಅಸ್ತಿತ್ವ ಕಳೆದು ಕೊಂಡು 'ಅಂಶ'ಗಣವೇ ಹೆಚ್ಚು ಪ್ರಚಲಿತವಾಗುತ್ತಿದ್ದ ಕಾಲವಿದು ಇಲ್ಲಿ ಬಂದಿರುವ ಗಣ ವಿನ್ಯಾಸ.

**೫. ೫. ೫. ೫**

**೫. ೫. ೫. ೫**

**೫. ೫. ೫. ೫. ೫. ೪. ೧**

**೫. ೫. ೫. ೫**

**೫. ೫. ೪. ೫**

**೫. ೫. ೫. ೫. ೫. ೪. ೧**

– – U UUUUUUU –U–UUU
ಇಂತೆಂದು ಪರಸಿಕೊಳುತಲಿ ಕಲ್ಲಮಂಗೆರಗಿ

–UUUUU – U– U – UU UUU
ಕಾಂತನೆಡೆಗೆಯು ಬಂದಳಾಗ ತನ್ನಯ ಪರಕೆ

– – U – – UUU – U – – U – U UU– – U –
ಯಂತಸ್ತಮಂ ಪೇಳುವಲಿ ಈರ್ವರುಂ ಕೂಡಿ ತಮ್ಮ ಪುರಕ್ಕೈ ತಂದರು

ಞ. ಞ. ಞ. ಞ

ಞ. ಞ. ಞ. ಞ

ಞ. ಞ. ಞ. ಞ. ಞ. ಞ –

U U U UU –U U U –U – UUU–
ಉದಯದಲಿ ಎದ್ದು ಗುರುಪಾದ ಪಂಕಜಮಸ

U U – U–U UU –UUU – UUU
ನ್ಮುದದಿಂದಲರ್ಚಿಸುತೆ ಕಲ್ಲಮನ ಸೇವೆಯನು

UUU–UUU – – U UU – U – UUU UU UU UUU–
ಅಧಿಕ ಭಕ್ತಿಯಲಿ ಮಾಡುತ್ತ ಗುರು, ಲಿಂಗ, ಜಂಗಮಕೆ ತನು ಮನ ಧನಮನು

UUUUU ––UUUU UUU–UU
ಇದಿರಡುತೆ ಸದ್ಭಕ್ತರುಗಳ ಕೆಳತನಗೈವು

UUU –UUU – – –U – – U
ತಧಮ ಕುಹಕರ ಚಾರಿತ್ರ್ಯಕ್ಕೆ ಪೇಸುತ್ತೆ

UUUUU– U – –U – UUU – – U–U U UUU–
ಸದುವಿನಯದಿಂದೆ ಸುಜ್ಞಾನ ಸಾಗರದೊಳೋಲಾಡುತಿರ್ದರು ಸತಿಪತಿ

ಞ.ಞ.ಞ.ಞ

ಞ.ಞ.ಞ.ಞ

ಞ.ಞ.ಞ.ಞ.ಞ.ಞ –

ಞ.ಞ.ಞ.ಞ

ಞ.ಞ.ಞ.ಞ

ಞ.ಞ.ಞ.ಞ.ಞ.ಞ –

ಹೀಗೆ ಷಟ್ಪದಿಯ ಗಣ ಭಾಗಗಳಲ್ಲಿ ವೈವಿಧ್ಯತೆಯನ್ನು ಮೆರದಿದ್ದಾನೆ ಆಯಾ ವಾಕ್ಯ ಅಥವಾ ವಾಕ್ಯಭಾಗವನ್ನು ರೂಢಿಸುವ ಉಪಗಣಗಳ ಮಾತ್ರಾ ಪ್ರಮಾಣದಲ್ಲಿ ಆಗುವ ಸೂಕ್ಷ್ಮವಾದ ವ್ಯತ್ಯಾಸಗಳಿಂದಲೇ, ಪದ್ಯದಲ್ಲಿ ಹಾಡಿನಗುಣ ಪ್ರವೇಶಿಸುವುದೂ, ಹಾಡಿನ ಗಮಕಗಳು ಬದಲಾಗುವುದೂ ಸಾಧ್ಯವಾಗುತ್ತವೆ.

ಪ್ರಾಚೀನ ಕವಿಗಳೆಲ್ಲ ತಮ್ಮ ಕಾವ್ಯಗಳನ್ನು ವಾರ್ಧಕ ಷಟ್ಪದಿಯಲ್ಲೆ ಬರೆದಿದ್ದಾರೆ. ಈ ಷಟ್ಪದಿಯನ್ನು ಆಕರ್ಷಕವಾಗಿ ಸಹಜವಾಗಿ ಬಳಸಿದ ಕವಿ ಎಂದರೆ ರಾಘವಂಕನು (ಸು.೧೨೩೦). ಶುದ್ಧ ರೀತಿಯ ಗಣರಚನೆಯನ್ನು ಮೀರುವ ಶಿಥಿಲ ಪ್ರಯೋಗಗಳು ನಡೆದುದಕ್ಕೆ ಇವೇ ಸಾಕ್ಷಿಯಾಗಿವೆ. ರಾಘವಾಂಕನ ಕಾಲದಿಂದೀಚೆಗೆ ಕೂಡ ವಾರ್ಧಕದ ಪ್ರಯೊಗದಲ್ಲಿ ಕೆಲವು ವೈಲಕ್ಷಣ್ಯಗಳೂ, ಹಾಗೂ ಹೊಸ ಹೊಸ ಪ್ರಯೋಗಗಳೂ ಆಗಿರುವುದುಂಟು.

**ಪರಿವರ್ಧಿನಿ ಷಟ್ಪದಿ ಉದಾ:**

– U U  U U  U U U U – U U –
ಚೆಂದದಿ ಕೆಲ ಬಲದೊಳಗಿರ್ದವರಾ

– U U  U U  U U U U U  U U U U U
ನಂದದಿ ಜಯ ಜಯಮೆನುತ ಪೊಗಳುತಿರೆ

– U  U U U – U U – U U U U  – U U – U U –
ಬಂದು ನೃಪನು ಕಂಬನಿಯೊಗ್ಗೆಡವುತ ಪಾದತಳಕ್ಕೆರಗೆ

– U  U U U  U U U U – U U U U
ಒಂದಿ ಶರಣ ಶಿರಪಿಡಿದೆತ್ತಿದನರ

– U  U U U U  U U U  – – U U
ವಿಂದ ಕರಗಳ ಮುಗಿದು ಭೋಪಾಲಕ

– U U  U U – U –  U U U – – U U  – – –
ನಿಂದನು ಕಲಿನಾಥಗೆ ಕೈಮುಗಿದಿಂತೆಂದನು ಬೊಮ್ಮಯ್ಯ

ಇಲ್ಲಿ ೧,೨ ಮತ್ತು ೪,೫ನೇ ಪಾದಗಳಲ್ಲಿ ಪ್ರತಿಯೊಂದರಲ್ಲಿಯೂ ೧೬ ಮಾತ್ರೆಗಳು(೪x೪) ೩ ಮತ್ತು ೬ನೆಯ ಪಾದಗಳಲ್ಲಿ (೪x೬+೨) ಒಟ್ಟು ೨೪ ಮಾತ್ರೆಗಳು ಬರುತ್ತವೆ. 'ಕುಮುದೇಂದು ರಾಮಾಯಣದಲ್ಲಿ' ಪರಿವರ್ಧಿನಿಯ ಬಗ್ಗೆ ಹೇಳಿದ ಸಾಮಾನ್ಯ ಲಕ್ಷಣವನ್ನೆ ಕವಿ ಇಲ್ಲಿ ಉಳಿಸಿದ್ದಾನೆ.

೪. ೪. ೪. ೪

೪. ೪. ೪. ೪.

೪. ೪. ೪. ೪. ೪. ೪. ಗು

ಹೀಗೆ ಪರಿವರ್ಧಿನಿಯ ಷಟ್ಪದಿಯನ್ನು ಬಳಸಿದ್ದಾರೆ. ಕುಮುದೇಂದುವಿನ ಬಳಿಕ ಪರಿವರ್ಧಿನಿಯನ್ನು ಕವಿಗಳು ಹೆಚ್ಚಾಗಿ ಬಳಸಿದಂತೆ ತೋರುವುದಿಲ್ಲ. ಸ್ವತಂತ್ರ ಕೃತಿಗಳು ಕೆಲವೇ ಬಂದಿವೆ. ಹೆಚ್ಚಾಗಿ

ಪರಿವರ್ಧಿನಿಯನ್ನು ಮಿಶ್ರಷಟ್ಪದಿಗಳಲ್ಲಿ ಬಳಸಲಾಗಿದೆ. ಇದರ ತಾಳಗತಿಯು ಕಥೆಗೆ ಸರಿಯಾಗಿ ಹೊಂದಿಕೊಳ್ಳದೆಂಬ ಕಾರಣಕ್ಕೆ ಇದನ್ನು ಕವಿಗಳು ಕೈಬಿಟ್ಟಂತಿದೆ.

ಆದರೆ ಕವಿಧೂಪದ ರಾಚೇಶನು ಈ ಕಾವ್ಯದಲ್ಲಿ ಭಾಮಿನಿ, ವಾರ್ಧಕ ಷಟ್ಪದಿಗಳ ಜೊತೆಗೆ ಪರಿರ್ಧಿನಿಷಟ್ಪದಿಯನ್ನು ಸಮವಾಗಿ ಬಳಸಿದ್ದಾನೆ.

**೪.೩. ವರ್ಣನೆಗಳು**

ಕವಿ ಕಾವ್ಯ ಸತ್ವವನ್ನು ಬಿತ್ತರಿಸುವಲ್ಲಿ ಆಯಾ ಕಥಾ ಸಂದರ್ಭಗಳಿಗೆ ತಕ್ಕಂತೆ ವರ್ಣನೆಗಳನ್ನು ಬಳಸಿದ್ದಾನೆ. 'ಅಷ್ಟಾದಶವರ್ಣನೆಗಳ' ಬಳಕೆ ಕಾವ್ಯದಲ್ಲಿ ಆಗಿದೆ. ಯಥೆಚ್ಛವಾಗಿ ವರ್ಣನೆಗಳು ಬಳಕೆಗೊಂಡಿದ್ದು, ಒಂದು ಬಗೆಯ ಬೇಸರವನ್ನು ತಂದರೂ, ಮೂಲ ಕಥಾವಸ್ತುವಿಗೆ ಯಾವುದೇ ದಕ್ಕೆಯಾಗಿಲ್ಲ. ಪದ್ಯರಚನೆಯಲ್ಲಿಯ ಯಾಂತ್ರಿಕತೆ, ಪುನರುಕ್ತಿಗಳು ಹಾಗೆಯೇ ಕೆಲವೆಡೆಗೆ ಬರುವ ವರ್ಣನೆಗಳು ಒತ್ತಯಪೂರ್ವಕವಾಗಿ ಸೇರಿದಂತೆ ಕಂಡು ಬರುತ್ತವೆ. ಆದಿಪ್ರಾಸದ ಬಳಕೆಯನ್ನು ಕಾವ್ಯದ ತುಂಬೆಲ್ಲ ಬಳಸಿ ಕಾವ್ಯಶಕ್ತಿಯನ್ನು ಮೆರೆದಿದ್ದಾನೆ.

ಕನ್ನಡ ಭಾಷೆಯ ಸಹಜ ಸತ್ವಕ್ಕೆ ಅನುಗುಣವಾಗಿಯೇ ಕವಿಯು ಆಡುಮಾತಿನ (Speech-rhythm) ಲಯದಲ್ಲಿ ಬರೆದಿದ್ದಾನೆ. ಕನ್ನಡದ ವೈಶಿಷ್ಟವೇ ಷಟ್ಪದಿ, ಸಾಂಗತ್ಯ, ಕಂದಪದ್ಯ ಇತ್ಯಾದಿಗಳಾಗಿವೆ.

**ಕಲ್ಲೂರಿನ ವರ್ಣನೆ**

ಕನ್ನಡದ ಆದಿ ಕವಿ ಪಂಪ ತನ್ನೂರಾದ ಬನವಾಸಿಯ ಮರ್ಣನೆಯನ್ನು ಮಾಡಿದಂತೆಯೇ ಕವಿ ಧೂಪದ ರಾಚೇಶನು ತನ್ನ ಊರಿನ ವರ್ಣನೆಯನ್ನು ಸುಧೀರ್ಘವಾಗಿ ಮಾಡುತ್ತಾನೆ. ಎರಡನೇ ಸಂಧಿಯ ೨೨ನೇ ಪದ್ಯದಿಂದ ೪೨ನೆ ಪದ್ಯದವರೆಗೆ ಕಲ್ಲೂರಿನ ವರ್ಣನೆಯನ್ನೆ ಒಳಗೊಂಡಿದೆ. ಕಲ್ಲೂರಿನ ಕೈಲಾಸಕ್ಕೆ ಹೋಲಿಸುತ್ತಾನೆ. ಹೀಗೆ ಕವಿಯ ಕಲ್ಪನಾ ವಿಲಾಸದಲ್ಲಿ ಕಲ್ಲೂರು ವಿಶೇಷವಾಗಿ ಬೆಳಗುತ್ತಿತ್ತು. ಚಂಪೂ ಕವಿಗಳ ಸಂಪ್ರದಾಯದಂತೆ ಕವಿ 'ಅಷ್ಟಾದಶವರ್ಣನೆ'ಗಳನ್ನು ತಂದಿದ್ದಾನೆ. ಅಲ್ಲಲ್ಲಿ ವರ್ಣನೆಗಳು ಸಹಜಾಕರ್ಷಕವಾಗಿವೆ. ಕಾವ್ಯಶೈಲಿ ವರ್ಣಣಾತ್ಮಕವಾಗಿದೆ. ಕಲ್ಪುರವು ವಿಶೇಷವಾಗಿ ಬೆಳಗುತ್ತಿತ್ತು, ತೋಟಗಳೆಲ್ಲ ಫಲಭರಿತವಾಗಿದ್ದವು. ಗದ್ದೆಗಳೆಲ್ಲ ಹರಿವ ಕಾಲುವೆಯಿಂದಾಗಿ ಸಮೃದ್ಧಭರಿತವಾಗಿದ್ದವು. ತಾವರೆಕೊಳದಲ್ಲಿ ತಾವರೆಗಳು, ಮಾಮರಗಳು ತಳಿರುಗಳಿಂದ, ಮಿಡಿಗಳಿಂದ ಜೋತಾಡುತ್ತಿದ್ದವು. ಕರ್ಜುರ, ಕೇತಕಿ, ಕುವರಕ, ಚಂಪಕ, ಮಲ್ಲಿಗೆಗಳು ಎಲ್ಲೆಡೆಯು ತಮ್ಮ ಸುವಾಸನೆಯನ್ನು ಪಸರಿಸಿದ್ದವು.

ಗಿಳಿಯ ಇಂಚರ ಝೇಂಕೃತಗೊಳ್ಳುತ್ತಿದ್ದವು. ಅಳಿಲು, ಕೋಗಿಲೆ, ಹಂಸ, ನವಿಲು, ಪಾರಿವಾಳಗಳ ಕಲರವ, ಕೊಳರ್ವಕ್ಕಿಯ ಕಲಕಲ ಧ್ವನಿ, ಎಳವಿಂಡುಗಳ ನೂಪುರಗಳ ಝೇಂಕೃತವಾದ ನಾದ, ಆ ಉದ್ಯಾನವನದೊಳಗಿನ ಕೊಳದಲ್ಲಿ ನೀರಾಡುವ ವಿದುಷಿಯರ ತನು, ಲತೆಯ ಚೆಲುವು, ಸೌಂದರ್ಯಯತವಾಗಿದೆ.

ಹಂಸವು ಉಲಿಯದ ಕೊಳವಿಲ್ಲ, ಕಾಯಿ, ಹಣ್ಣುಗಳಿಲ್ಲದ ಮರವಿಲ್ಲ, ಪರಮಳವಿಲ್ಲದ ಬಳ್ಳಿಗಳಿಲ್ಲ, ಬೆಳೆಗಳಿಲ್ಲದ ಹೊಲಗಳಿಲ್ಲ ಹೀಗೆ ಪುರವೆಲ್ಲವು ಸಮೃದ್ಧವಾಗಿಯೇ ಇತ್ತು ಕಣ್ಸೆಳೆಯುವ ಬೀದಿಗಳು, ದಾರಿಹೋಕರ ಶ್ರಮವನ್ನು ಆರಿಸಿಕೊಳ್ಳಲು, ಬೀದಿಯ ಎರಡು ಬದಿಗೂ ಗಿಡಗಳು, ತಂಪಾದ ಗಾಳಿಯನ್ನು ಬೀಸುತ್ತಿದ್ದವು. ರಾರಾಜಿಸುವ ಕೋಟೆ, ಮಂಗಳ ಆಭರಣಗಳ ಮಣಿಮುಕುರ, ಪೊಂಗಳಸ, ತೋರಣಗಳಿಂದ, ರೇಶ್ಮೆಬಟ್ಟೆಯ ಪತಾಕೆಗಳು, ನಾನಾ ದೂತಗಜರಿಂದ ಶಾಂತಿ ಸಂದೇಶವನ್ನು ಸಾರುವಂತಿದ್ದವು. ಕುಸುಮ ರತ್ನದ ಗಂಧ ಚಾಮರಗಳು ಪೊಳಲಲ್ಲಿ ಬೀಸುತ್ತಿದ್ದವು. ಹೀಗೆಯೇ ಕುಶಲ ಕವಿಯಸಮೂಹ ರಸಿಕರ ಸಮೂಹ ಗೋಷ್ಠಿಗಳನ್ನು ಮಾಡುತ್ತಿದ್ದರು. ವೀಣೆಯ ರಾಗವು ಕೂಡ ಕೇಳಿಬರುತ್ತಿತ್ತು.

ಗ್ರಾಮದ ಜನರೆಲ್ಲ ಶಿವಭಕ್ತಿ, ದಯೆಯುಳ್ಳ ಸಜ್ಜನರು, ಸುಗುಣಶೀಲರು ಆಗಿದ್ದಾರೆ. ಗುಣಹೀನರು, ವಿದ್ಯೆ ಇಲ್ಲದವರು, ಕೆಟ್ಟಜನರು, ಪಂದೆಗಳು, ಮನದಲ್ಲಿ ಕೊರಗುವವರೂ, ಎಲ್ಲಿ ನೋಡಿದರೂ ಯಾರುಇಲ್ಲ. ಹೀಗೆ ಇಡೀ ಸಮಾಜವು ಸಜ್ಜನರ ಬೀಡಾಗಿದೆ.

ದುಷ್ಟ ಶಕ್ತಿಗಳನ್ನು ಮರ್ದಿಸುವವನು, ಆ ಗಿರಿಯಲ್ಲಿದ್ದಂತೆ, ಗೋಪುರವು ಕಂಗೊಳಿಸಿತು. ಹರ್ಷದಿಂದ ಆ ಪುರದ ಹತ್ತಿರ ಬರಲು ಹರ ನಮಸ್ತು ನಮಸ್ತೆನುತ ಸತಿ ಪುರುಷರು ಕೈಮುಗಿಯಲು ಜ್ಯೋತಿಗಳು ಉರಿದವು. ಹೀಗೆ ದೇವಾಲಯ ಕಂಗೊಳಿಸಿತು. ಕಲ್ಲೂರಿನ ಕಲ್ಲೇಶ ಹೇಗೆ ಕಾಣುತ್ತಿದ್ದ ಎಂಬುದರ ವರ್ಣನೆಯನ್ನು ನೀಡುತ್ತಾನೆ. ಮಾರ್ತಾಂಡ, ಕುಂಡಲಿಮಂಡಿತ, ಬ್ರಹ್ಮಾಂಡವನ್ನೆ ಗರ್ಭಿಕರಿಸಿಕೊಂಡ ಜಯಕರ, ವೀರಭದ್ರನ ಅವತಾರವೇ ಆದ ಕಲ್ಲೇಶನಿಗೆ ವಿನಯದಿಂದ ವಂದಿಸಿದರು. ಹೀಗೆ ಕಲ್ಲೂರಿನ ವರ್ಣನೆ ಮನೋಜ್ಞವಾಗಿ ಮೂಡಿಬಂದಿದೆ.

## ವೇಶ್ಯೆಯರ ವರ್ಣನೆ

ವೇಶ್ಯಯರ ರೀತಿನೀತಿಗಳನ್ನು ಬಣ್ಣಿಸುವ ಕೆಲವು ಪದ್ಯಗಳು ಕಾವ್ಯದಲ್ಲಿ ಬರುತ್ತವೆ. ರವಿ ಶಶಿಗಳು ಕಲಹದಿಂದ ಮುಳುಗಿದ ಬೀದಿಯಲ್ಲಿ ವೇಶಿಯರು ಮೆರೆದರು. ಇವರು ಕಲಾ ಪ್ರವುಡರು, ರತಿಯಂತಿದ್ದು ದಾನಿಗಳಾಗಿದ್ದರು. ದೇವ ರೂಪವನ್ನು ಕೀಳಡಿಸುವಂಥವರು, ಅಷ್ಟೈಶ್ವರಿಗಳು ಆಗಿದ್ದರು. ಹೀಗೆ ವೇಶ್ಯಗೇರಿಯು ಮೆರಿಯುತ್ತಿತ್ತು. ವ್ಯಾಪಾರಿಗಳು, ಬ್ರಾಹ್ಮಣರು, ರತ್ನದ ವ್ಯಾಪಾರಿಗಳು, ಕ್ಷತ್ರಿಯರು, ವೈಶ್ಯರು, ಲೋಹಕರರು, ಕವಿಗಳು, ಮುಂತಾದವರೆಲ್ಲರೂ ಇಲ್ಲಿ ಆಗಮಿಸುತ್ತಿದ್ದರು.

ಈ ಪರಿಯ ವೇಶಿಯರು ಗೈವಕ
ಲಾ ಪ್ರವುಢರತಿಚಾಗಿಗಳು ಸ್ಮರ
ರೂಪ ಕೀಳ್ವಡಿಸುವರು ಅಷ್ಟೈಶ್ವರಿಯುಳ್ಳವರು. (೨-೫೭)

ಹೊಸ ಕಳಸ, ಕನ್ನಡಿ, ತೋರಣಗಳಿಂದ, ನವರತ್ನಗಳ ಚಾಮರದ ಪರಿಮಳ, ಹಲವು ಧಾನ್ಯಗಳ, ಕುಸುಮ, ಹೀಗೆ ಇವೆಲ್ಲ ಅಕ್ಕಸಾಲಿಗರು, ಕಂಚುಗಾರರನ್ನು ಸೆಳೆಯುತ್ತಿದ್ದವು. ವಿಟನು ನಲ್ಲಳ ಕೂಡ ಚದುರಂಗದಾಟವನ್ನು ಆಡುವುದನ್ನು ಕವಿ ಇಲ್ಲಿ ವಿವರಿಸುತ್ತಾನೆ. ವೇಶಿಯರ ಮನೆಗೆ ಬಂದ ಕಾಮುಕ ಪ್ರವೃತ್ತಿಯ ಡಂಭಾಚಾರಿಗಳನ್ನು ವರ್ಣಿಸುತ್ತಾನೆ.

ಇನಿಯಳು ಮುಳಿದಳೆಂದು ವಿಟ ಕಾಲ್ಪಿಡಿದು ಕಲುಷ
ಮನವುಳಿಯೆಲುಮವಳು ನಕ್ಕಳದಕಂಡೊರ್ವ
ವನಿತೆ ಕರೆದೇಂ ಕಾರಣಂ ನಕ್ಕೆಯೆನಲುಮೀ ಭೋಗಲಂಪಟನ ಪರಿಯು
ಮುನಿದೆತ್ತ ಮೆಟ್ಟಿದಡೆ ಎತ್ತ ಚಪ್ಪಟೆಯಹುದು
ಫಣಿಯುಮಾ ತೆರನಾದುದೆನ್ನಾತ್ಮ ರಮಣನಗ
ಲ್ದನುಮೆಂಬ ಚಿಂತೆಲಿರಲಿವನೇಕೆ ಕಾಲ್ಪಿಡಿದನೆಂದಾನು ನಕ್ಕೆನೆಂದು (೪-೪೭)

ಹೀಗೆ ಭೋಗಲಂಪಟರು, ಕಾಮುಕರ ಚಿತ್ರಣವನ್ನು ನೀಡುತ್ತಾನೆ. ಭೂಕಾಂತ ಆತ್ಮಜರು, ಕಲೆಗಳನ್ನೆಲ್ಲ ಅರಿತವರು, ಭೋಗಿಗಳು ಅಧಿಕ ಸುಖಿಗಳು ಕುಶಲರು ಆಗಿದ್ದರು. 'ಫಣಿ' ಹೇಗೆ ಎತ್ತ ಸುತ್ತಿದರೂ ಚಪ್ಪಟೆಯೇ ಆಗಿರುತ್ತದೆಯೋ ಹಾಗೆಯೇ ಕಾಮೂಕನ ಪರಿಯು ಆಗಿದೆ ಎಂಬ ವಿವರಣೆಯನ್ನಿಲ್ಲಿ ಕವಿ ನೀಡುತ್ತಾನೆ. ಬದುಕಿನಲ್ಲಿ ತೃಪ್ತಿ ಎಂಬುದೇ ಇಲ್ಲ ಎಂಬುದರ ಸಂಕೇತವಾಗಿ ಈ ವಿವರಣೆಯನ್ನು ಒದಗಿಸುತ್ತಾನೆ.

ವೃದ್ಧ ಸೂಳೆಯೊಬ್ಬಳವರ್ಣನೆ ಹೀಗೆ ಬಂದಿದೆ.
ಜರಿದ ಕಾಯದ ಸುಕ್ಕುಗಲ್ಲದ
ನೆರೆದಲೆಯ ಮುಂ ಕೆಡದ ದಂತದ
ಮಿರುಪ ನಯನಾಂಜನದ ಮೈಯನೆಯೆಡೆಯಿಡವ ಎಲ್ಲೆ
ಗರವ ಮೆಲ್ಲನೆ ಮಾತನಾಡುವ
ಕರೆದು ಮೋಹವುಮುಂಟೆಯೆಂಬುತೆ
ವರ ಗೃಹಕೆ ಬನ್ನೆಂಬ ವೃದ್ಧಗಣಿಕೆಯರೊಪ್ಪಿದರು. (೪-೫೩)

ಹಿಗೆ ವೃದ್ಧ ಸೂಳೆಯರು ಸುಕ್ಕುಗಲ್ಲವನ್ನು ಹೊಂದಿ, ತೆಳುವಾದ ದೇಹವನ್ನು, ತಲೆಯಲ್ಲಿ ಬಿಳಿಯ ಕೂದಲನ್ನು ಹೊಂದಿದರು. ಅವರ ಮಿರುಗುವ ಹಲ್ಲುಗಳು, ನಯನದಲ್ಲಿಯ ಕಾಡಿಗೆ, ಮೈಮಾಟ ಎಲ್ಲವು 'ಮಾತನಾಡದೇ ಇರುವವರನ್ನು ಮಾತನಾಡಿಸುವ' ಇವರ ಕಲೆ, 'ಮೋಹವಿಲ್ಲದವರಲ್ಲೂ ಮೋಹ ಉಂಟಾಗು'ವಂತೆ ಮಾಡುವ ಇವರ 'ಮೋಹಕ ನೋಟ' ರಸಿಕರನ್ನು ಕೈಬೀಸಿ ಗೃಹಕ್ಕೆ ಕರೆಯುತ್ತಿದ್ದರು. ವೃದ್ಧ ಸೂಳೇಯರೇ ಇಂಥ ಮೋಹಕ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದರೆಂದರೆ, ತರುಣಿಯರು ಹೇಗೆ ಮನಮೋಹಕ ಮೈಮಾಟವನ್ನು ಹೊಂದಿ, ರಸಿಕರನ್ನು ಆಹ್ವಾನಿಸುತ್ತಿದ್ದರೆಂಬದನ್ನು ನೆನೆದಾಗ ಮೈಜುಮ್ಮೆನ್ನುತ್ತದೆ. ಹಾಗೆಯೇ ಕವಿ 'ರಸಿಕ ಕವಿ'ಯಾಗಿ ಹೊರಹೊಮ್ಮಿದ್ದಾನೆ.

**ಸೂಳೇಗೇರಿಯ ವರ್ಣನೆ**

ಇಂತು ಪಾಳ್ಮನೆ ಪಶುವಿನಿಕ್ಕೆಯಾರವೆ ಗೃಹದ

ಪಿಂತೆ ಮರದಡಿಯ ಭಿತ್ತಿಯ ನೆರಳೊಳಗೆವೊಂದಿ

ನಿಂತು ನುಡಿಯುಣ್ಮದೆ ಉಗುರ್ಗೊಳದೆ ಪಲ್ನಾಟದಲ್ನ ಖಕ್ಷತ ಚುಂಬಿನಿಂ

ಕಂತುಕೇಳುವೆಯಿಂದ ಪಾಣ್ಬಜನಮಿರೆ ನೋಡು

ತಂ ತಡೆಯದಲ್ಲುಂಬರಲು ಹದಿರುವೈಸಿಕರ

ಸಂತೆಯುರೆ ಗನ್ನಗತಕದ ಇಕ್ಕೆಯೆನಲೆಸೆವ ಸೂಳೆಗೇರಿಯ ಕಂಡನು (೭–೪೭)

ಹೀಗೆ ಸೂಳೆ, ಸೂಳೆಗೇರಿ, ಮುದಿಸೂಳೆಯರ ವರ್ಣನೆ ಬಹುವ್ಯಾಪಕವಾಗಿ ಕಾವ್ಯದಲ್ಲಿ ಮೂಡಿದೆ. ಇಲ್ಲಿ ಕೇರಿಯ ಸಂಪೂರ್ಣ ಚಿತ್ರಣವನ್ನು ನೀಡುತ್ತಾನೆ. ಕಲ್ಲೂರಿನ ವರ್ಣನೆಯ ಸಂದರ್ಭದಲ್ಲಿ ಮೊಲ್ಲೆಬೊಮ್ಮಯ್ಯನ ಮದುವೆ ಸಂದರ್ಭದಲ್ಲಿ ಬಹುದೀರ್ಘವಾಗಿ ಸೂಳೆಯರ ವರ್ಣನೆಯನ್ನು ಮಾಡಿದ್ದಾನೆ. ನಮ್ಮ ಕವಿಯು 'ಶೃಂಗಾರ ಪ್ರಿಯ'. ಹಾಗಾಗಿಯೇ ಬಹುವ್ಯಾಪಕವಾಗಿ ಸೂಳೆಯರ ಹಾಗೂ ಸೂಳೆಗೇರಿಯ ವರ್ಣನೆಯನ್ನು ಮಾಡುತ್ತಾನೆ.

**ಸ್ತ್ರೀಯರ ವರ್ಣನೆ**

ರಾಣಿಯರು, ರಾಜಕುಮಾರಿಯರು, ಸೂಳೆಯರ ವರ್ಣನೆ ಕಾವ್ಯದಲ್ಲಿ ಅಧಿಕವಿದೆ. ಸ್ತ್ರೀಯರು ಧರಿಸುವ ಆಭರಣಗಳು, ವೇಷಭೂಷಣಗಳು, ಅವರ ಒಳಪು, ವೈಯ್ಯಾರ, ನಡೆ, ನುಡಿ ಎಲ್ಲವನ್ನು ಬಹುವರ್ಣನಾತ್ಮಕವಾಗಿ ವಿವರಿಸಿದ್ದಾನೆ. ಚಂದ್ರಮುಖಿಯಾದ ಪಂಪಾಂಬೆಯ ವರ್ಣನೆ, ವನದೇವತೆಯಂತೆ ಶೋಭಿಸಿದ ಕುವರಿಯರನ್ನು ವರ್ಣಿಸುತ್ತಾನೆ. ಶೃಂಗಾರಕ್ಕೆ ಇನ್ನೊಂದು ಹೆಸರೇ ಸ್ತ್ರೀ. ಹೀಗಾಗಿ ಕಾವ್ಯದ ತುಂಬೆಲ್ಲ ಕವಿ ಸ್ತ್ರೀಯರ 'ಶುಂಗಾರ'ವನ್ನೆ ವರ್ಣಿಸುತ್ತಾ ಸಾಗುತ್ತಾನೆ. ಸ್ತ್ರೀಯರ ಅಲಂಕಾರಿಕ ವಸ್ತುಗಳ ಸಂಖ್ಯೆಯೂ ಅಪಾರ, ಕಳಸ, ಕನ್ನಡಿ, ಕುಂಕುಮ, ವಿಧವಿಧವಾದ ಆಭರಣಗಳು, ಸುಗಂಧದ್ರವ್ಯಗಳು ಇತ್ಯಾದಿ ಬಳಸುತ್ತಿದ್ದರು.

ಶತಪತ್ರ ಪತ್ರಯುಗನೇತ್ರೆ ಕೋಮಲಗಾತ್ರೆ

ಸತಿಕುಲದ ನುಣ್ಣೆಸಲ ಚಿತ್ರೆ ಸನ್ನುತ ಪಾತ್ರೆ

ಅತಿಖ್ಯಾತೆ ದುರ್ಗುಣಶ್ರೋತ್ರೆ ಸಜ್ಜನಗೋತ್ರೆ ಕಲ್ಲಮ್ಮ ಮನದೊಳರಿದು

ಪತಿಯೊಳೆಂದಳು ಚಿತ್ರ ಮಿತ್ರ

ಕ್ಷಿತಿಯಿಂದೊಂಡಗಿದುದ ಧಾತ ಕಲ್ಪುರಪಾತ್ರಾ

ಸಿತಕಂಠ ನೀಲಸಖಮಿತ್ರ ಕಲಾಧಿನಿನೇತ್ರ ಕಲ್ಲೇಶನೋದನೆಂದು (೩–೧೪)

ಹೀಗೆ ಕಲ್ಲಮ್ಮಳನ್ನು ವರ್ಣಿಸಲಾಗಿದೆ.

**ಪ್ರಾಕೃತಿಕ ವರ್ಣನೆ**

ಕವಿ ತನ್ನ ಕಾವ್ಯದಲ್ಲಿ ಸಾಂದರ್ಭಿಕವಾಗಿ ಪ್ರಕೃತಿಯನ್ನು ವರ್ಣಿಸುತ್ತಾ ಬಂದಿದ್ದಾನೆ. ಪ್ರಕೃತಿಯ ಸೌಂದರ್ಯವನ್ನು ಹೆಚ್ಚಿಸುವ ಪಕ್ಷಿಸಂಕುಲವನ್ನು ವರ್ಣಿಸಿದ್ದಾನೆ. ಹಂಸ, ನವಿಲು, ಗೊರವಂಕ, ಕನ್ನಡವಕ್ಕಿ, ಕೋಗಿಲೆ, ಚಕೋರಗಳು ಹೀಗೆ ಹಲವಾರು ಪಕ್ಷಿಗಳನ್ನು ವರ್ಣಿಸಿದ್ದಾನೆ. ಬೀಸುವ ತಂಗಾಳಿ, ಬೃಂಗಾಳಿ, ಎಲ್ಲ ಬಗೆಯ ಹೂಗಳನ್ನು ವರ್ಣಿಸುತ್ತಾನೆ. ಶರಧಿ, ಸ್ವಾತಿಮುತ್ತು, ಚಂದ್ರ, ಸೂರ್ಯ, ಸಮುದ್ರ ವರ್ಣನೆಯನ್ನು ಬಿಳಿಯ ಮೋಡಗಳಿಂದಲೂ, ನಕ್ಷತ್ರಗಳಿಂದಲೂ ಶೋಭಿಸುವ, ಆಕಾಶವನ್ನು ಕವಿ ಬಹು ಚಾತುರ್ಯ ಪೂರ್ಣವಾಗಿ ಬಣ್ಣಿಸಿದ್ದಾನೆ. ಮಾವು, ಸಂಪಿಗೆ, ಸುರಹೊನ್ನೆ ಗಿಡಗಳಿಂದ ಶೋಭಿಸುವ, ಅಶೋಕ, ಹರಿಚಂದನಗಳಿಂದ ಚೇತೋಹಾರಿಯಾದ ಪ್ರಕೃತಿಯನ್ನು ವರ್ಣಿಸುತ್ತಾನೆ.

ಶರಧಿಯಾ ಶುಕ್ತಿಗೆ ಕರೆವ ಸ್ವಾತಿಯಪನಿಗ
ಳಿರದೆಲ್ಲ ಬಂದು ಮುತ್ತುಗಳಾಗಿ ಗಗನದೊಳು
ಉರೆ ಸಿಕ್ಕಿದವುಮೆನಲುಮಂಮಬರತಳದೊಳು ನಕ್ಷತ್ರಗಳು ಮೂಡೆಸೆದವು.(೭-೩೭)

ಪ್ರಕೃತಿಯ ವೈಪರಿತ್ಯಗಳು ಬದುಕಿನಲ್ಲಿ ಮುಂದೆ ನಡೆಯಬಹುದಾದ ಕೆಡಕನ್ನು, ಒಳಿತನ್ನು ಸಂಕೇತಸುತ್ತಿದ್ದವು. ಮೊಲ್ಲೆಬೊಮ್ಮಯ್ಯನ ಅಂಶ ಕಲ್ಲಮ್ಮಳ ಉದರದಲ್ಲಿ ಮೂಡಲು 'ಧೂಮಕೇತು' ಮೂಡಿತು. ಆಕಾಶದಲ್ಲಿ ಏಕೆಂದರೆ ಬೊಮ್ಮಗೌಡನಿಗೂ, ಕಲ್ಲೇಶನಿಗೂ ವಿವಾದವಾಗುತ್ತದೆಂಬ ಸಂಕೇತವಾಗಿಯೂ, ಮುಂದೆ ಅರಸನಿಗೆ ಕೆಡಕಾಗುತ್ತದೆಂಬ ಸಂಕೇತವಾಗಿಯೂ ಬಿಜ್ಜಳನ ಕೊಲೆಯ ಪೂರ್ವದಲ್ಲಿಯೂ 'ಧೂಮಕೇತು' ಆಕಾಶದಲ್ಲಿ ಕಾಣಿಸುತ್ತದೆ.

ಹರನಂಶನಾ(ಗ) ಮಣ್ಯೋದರದೊಳಗೆ ಪೊಗಲು ಬೆಳವೊಲು ತೆಳುವ
ಇರುಳಾಣ್ಮನಂ ಕಂಡ ಶರಧಿ
ಸುರು ಬೆಳೆಯತೊಡಗಿತಾವರ್ತನಾಭಿಯು ಗುಣ್ಪನ್ಯೆದಿತು ತ್ರಿವಳಿಗಟ್ಟೆಯು
ಇರದೆ ಸಮನಾದು ಡಾರಡಿಗುರುಳು ಕವಲ್ತವೆಳೆ
ಹರಿಮಧ್ಯ ಬಿಣ್ಪನ್ಯೆದಿತು ರಾಜಹಂಸಗತಿ
ಉರೆ ವಯ್ಯಮಾಗೆ ಬಟ್ಪಾಷೆಗಳೆಸಳ್ಗಣ್ಗಳಾಗೆ ಸುಯಿಲಡಿಯಿಟ್ಟುದು (೨-೪೬)

ಮೊಲ್ಲೆಬೊಮ್ಮಯ್ಯನು ತಾಯಿ ಕಲ್ಲಮ್ಮಳ ಗರ್ಭದಲ್ಲಿ ಮೂಡಲು ಇಷ್ಟೆಲ್ಲ ಪ್ರಾಕೃತಿಕ ಬದಲಾವಣೆಗಳಾದವು. ಹಾಗೆಯೇ ಬಿಜ್ಜಳನು ಮಡಿಯಲು ಸೂಚನೆ ಎಂಬಂತೆ

ಪೊಡೆವಿಪಾಲಕ ಬಿಜ್ಜಳಾಂಕನು
ಮಡಿಯುವುದಕೆ ಸೂಚನೆಯ ಕುರುವೆಗೆ
ಕಡಲವೊಡಬಾನಲನು ಉರ್ವಿಯುಮಾಗಸಕೆ ಪತ್ತಿ

ಸುಡುತಲೈತರುಹುದೊಮೆಂಬೊಲು

ಪಡುವಣಾಗಸಗಡಲ ಸಂಜೆಯ

ಗಡಣ ಕೆಂಪೆಸೆಯಿತ್ತು ರುಧಿರದ ಸರಿಯ ಮುಗಿಲಂತೆ॥ (೧೭-೪೭)

ಪರಮೆಗಳು ಇಕ್ಕೆಗಳ ಸಾರ್ದವು

ಸರಸಿಜಂಗಳು ಮುಗಿಯೆಮಂದಾ

ಮರುತನೊಯ್ಯನೆ ತೀಡಿದುದು ಕೈರವಗಳರಳಿದವು

ಇರದೆ ತಲೆದೋರಿದವು ಚಾರಗೆ

ಮೆರೆದವಭವಾಲಯದಿ ಹರೆಗಳು

ಪುರದ ಬೀದಿಗಳೊಳಗೆ ತೋರ್ದವು ದೀಪ್ತಿಗಳವೆಳಗು(೧೭-೪೮)

ಎಳೆಯ ಕತ್ತಲೆಗೂಡಿ ಕಾವಳ

ಗಳಲನೆಯು ಬಂದಾವರಿಸಿದುದು

ಮಿಳಿತ ಧೂಮಕೇತುವೊಗೆದುದು ಕಲ್ಲಮಳೆಗರೆಯೆ

ಪೊಳಲ ಎಲ್ಲೆಡೆಯೊಳಗೆ ಕೊತ್ತಳಿ

ಗುಳುವು ಮೊರೆದೂಳತ್ತಲಿರ್ದವು

ಮೊಳಗಿದವು ಎಣ್ಣೆಸೆಗಲೊ ಸುಧಾತಳವು ಕಂಪಿಸಿತು (೧೭-೪೯)

ಹೀಗೆ ಪ್ರಾಕೃತಿಕ ವರ್ಣನೆಗಳು ಬಂದಿವೆ. ಬಿಜ್ಜಳನ ಅಂತ್ಯವನ್ನೆ ಪ್ರಕೃತಿ ಪ್ರತಿನಿಧಿಸುತ್ತಿತ್ತು. ಪಶ್ಚಿಮದಲ್ಲೆಲ್ಲ ರಕ್ತದ ಕೆಂಪೇರಿತ್ತು. ಸಂಜೆಯ ಮೋಡವೆಲ್ಲ ಕೆಂಪಾಗಿ ಕಂಗೊಳಿಸಿತು. ಕತ್ತಲಾಗುವ ದೃಶ್ಯವನ್ನು ಕವಿ ಪೂರ್ವಾಂಗನೆಯ ಭಾನು ಪಶ್ಚಿಮಾಂಬೋಧಿಯೊಳು ಪದಹೀನನಾಗಿ ಕೆಡೆದನುಯೆಂದು ಎನ್ನುತ್ತಾರೆ. ಹೀಗೆಪೂರ್ವದಲ್ಲಿ ಜನಿಸುವ ಭಾಷ್ಕರನು ಪದಹೀನನಾಗಿ ಪಶ್ಚಿಮದಲ್ಲಿ ಮುಳುಗಿದನು. ಸೂರ್ಯ ಮುಳುಗುವ ದೃಶ್ಯ, ಹಾಗೂ ಬಿಜ್ಜಳನ ಪ್ರಾಣ ಮುಳುಗುವ ದೃಶ್ಯ ಎರಡನ್ನು ಇಲ್ಲೆ ಮೇಳೈಸಲಾಗಿದೆ.

**ಋತುಗಳ ವರ್ಣನೆ**

ವರ್ಷದ ಆರು ಋತುಗಳನ್ನು ಕವಿ ತನ್ನ ಕಾವ್ಯದಲ್ಲಿ ವರ್ಣಿಸಿದ್ದಾನೆ.

ತರುಣಿಯರ ಮೈಯ ಸೆಕೆ ದೀಪ್ತಿಗಳ ಜ್ವಾಲೆಯಿಂ

ದುರೆ ಗ್ರೀಷ್ಮ ಋತುವೆನಿಸೆ ಘಮಬಿಂದುಗಳಿಂದ ವರುಷ ಋತುಮೆನಿಸಿ

ಬಿಜ್ಜಣೆದೆಲರಿನಿಂದ ಶಿಶಿರಾರ್ತುಮೆನಿಸಿತು ತಣ್ಣಸ

ದೆರಲ ಸೀತದಿ ಹಿಮಂತಾರ್ತುಮೆನಿಸಿತು ಪಲವು
ತೆರದ ವಿಲ್ಗಂಪುಗಾಳಿಯ ತಂಪಿನಿಂ ಬಸಂ
ತಋತುಮೆನಿಸಿತು ನಗೆಯವೆಳಪಿನಿಂ
ಶರದೃತುಮೆನಿಸಿತಾಗಲು (೭-೩೨)

ತರುಣಿಯರ ಮೈಕಾವಿನಿಂದ ಜಾತಿಯುರಿದು 'ಬೇಸಿಗೆಯ'ಕಾಲವಾಯ್ತು. 'ಬೆವರ' ಹನಿಗಳಿಂದ 'ಮಳೆಗಾಲ'ವೆನಿಸಿತು. ಬೀಸಣಿಕೆಯ ಗಾಳಿ ಬೀಸಲು 'ಚಳಿಗಾಲ'ವೆನಿಸಿತು. ತಣ್ಣನೆಯ ಶೀಥದಿಂದ ಹಿಮವೇ ಆವರಿಸಿತು. ಹಲವು ತರದ ತಂಪು ಗಾಳಿ ಬೀಸಲು ವಸಂತ ಋತು ಎನಿಸಿತು. ನಗೆಯ ಹೊಳಪಿನಿಂದ 'ಶರದೃತು' ಎನಿಸಿತೆಂದು ಹೀಗೆ ಆರು ಋತುಗಳ ವರ್ಣನೆ ಮಾಡುತ್ತಾನೆ.

**ಗರ್ಭ ಮೊಳೆಯುವ (ಚಿಗುರುವ) ವರ್ಣನೆ**

ಕವಿ ಧೂಪದ ರಾಚೇಶನು ಕಾವ್ಯದಲ್ಲಿ ಮೊಲ್ಲೆಬೊಮ್ಮಯ್ಯನು ತಾಯಿಯ ಗರ್ಭದಲ್ಲಿ ಹೇಗೆ ಬೆಳೆಯತೊಡಗಿದನೆಂಬುದನ್ನು ವಿವರಿಸುತ್ತಾರೆ.

ಕೋಕನಿಭ ಕುಚಗಳುರ್ವಿದವು ವಾಗವರನುತ್ರಿ
ಲೋಕದೊಳಗುಳ್ಳ ಮೋಹನರಸವನೀಂಟಿ ಪೊ
ನ್ನಾಕುಟ್ಮಳಗಳ ಮೇಲೆ ಹರಿ ನೀಲಗಳ ಮುಚ್ಚಳವ ಬಾರ್ಗೆಯಿದಂದದಿ
ಆ ಕೋಮಲೆಯ 'ಚೂಚುಕಂ' ಗಳಿಂತೊಪ್ಪಿದವು
ಶ್ರೀಕಾರಮಂ ಕೂಡಿ ತನು ಪೊಳಪನ್ನೈದಿತ್ತು
ತಾ ಕವಿದವಾಲಸ್ಯ ಮರಹು ಬೆರಗುರೆ ನಿದ್ರೆ ಬಯಕೆಯಿಂ ಬೇವಸಗಳ (೨-೪೭)

ಶಿಶುವು ತಾಯಿಯ ಗರ್ಭದಲ್ಲಿ ಒಂದು ಪೂರ್ಣ ರೂಪ ಪಡೆದಿದುರ ವರ್ಣನೆ ಇದೆ. ಹಾಗಯೇ, ನವ ಮಾಸ ತುಂಬಲು ಬೇನೆಯು (ಹೆರಿಗೆ ನೋವು) ಕಾಣಿಸಿಕೊಳ್ಳಲು,

ತರುಣಿಯರ್ಬಳಿಕ ಬೆನ್ನಂ ಪಿಡಿದುವಾವಲ್ಕೆ
ಸರಸಿಜಾಯತನೇತ್ರೆ ಕಲ್ಲಮ್ಮ ಪಡೆದ ಪೊ
ನ್ನೆರಕ ಪುತ್ಥಳಿಯಂತೆಸೆವ ಕುಮಾರನೊ ಮುತ್ತೆ ಒಗೆದೆಸೆ ವ ಬಾಲಕನಿಗೆ
ಹರುಷದಿಂ ಬೆಚ್ಚುದಕಮಂ ಕಾಸಿ ಕಾಂಚನದ
ಹರಿವಾಣದೊಳಗಿಟ್ಟು ಮೊಕ್ಕುಳಂ ಕೊಯ್ದು ಮೇ
ಣ್ಮಿರುಗುತಿಹ ರತ್ನದಾರತಿಯ ನಿವ್ವಾಳಿದರಾರತಿಯ ಪ್ರತಿವೆಂಗಳು (೨-೪೮)

ಹೀಗೆ ಇಂದಿಗೂ ಕೂಡ 'ಪ್ರಸವ' ಸಂದರ್ಭದಲ್ಲಿ 'ಸೂಲಗಿತ್ತಿಯರು' ಗರ್ಭಿಣಿಯರಿಗೆ ಧೈರ್ಯವನ್ನು ತುಂಬಿ, ಯಾವುದೇ ತೊಂದರೆ, ಇಲ್ಲದೆ ಪ್ರಸವವಾಗುವಂತೆ ಮಾಡುತ್ತಾರೆ. ಹೊನ್ನನ್ನೆ ಎರಕ ಹೊಯ್ದ ಪುತ್ಥಳಿಯಂತಿರುವ ಗಂಡು ಮಗುವು ಜನಿಸಲು, ಬಿಸಿ ನೀರನ್ನು ಕಾಯಿಸಿ, ಮಗುವನ್ನು ಕಾಂಚನದ ತಟ್ಟೆಯಲ್ಲಿಟ್ಟು, ಹೊಕ್ಕುಳದ ಹುರಿಯನ್ನು ಕತ್ತರಿಸಿ, ರತ್ನದ ಆರತಿಯನ್ನು ಮಾಡಿದರು. ಗರ್ಭ, ಪ್ರಸವ, ಮಗುಜನಿಸಿದಾಗ ಹುರಿಯನ್ನು ಕತ್ತರಿಸುವದು ಹೀಗೆ ಈಗಿರುವ ವೈಜ್ಞಾನಿಕ ಅರಿವು ಆ ಕಾಲಕ್ಕೆ ಅವರಿಗೆ ಇತ್ತು.

**ನಾಮಕರಣ ವರ್ಣನೆ**

'ರತ್ನ ಪುತ್ಥಳಿಯಂತೆ' ಜನಿಸಿದ ಮಗುವಿಗೆ ಬೊಮ್ಮಗೌಡ ಪುರಾಣಿಕನನ್ನು ಕರೆಯಿಸಿ ಜಾತಕ ಕರ್ಮವನ್ನು ಲಿಂಗಧಾರಣೆಯನ್ನು ಮಾಡಿಸುತ್ತಾನೆ. ಹಾಗೆಯೇ ಸೂಲಗಿತ್ತಿಯರಿಗೆ ಈಗಲೂ ಮಾಡುವ ಒಂದು ಪದ್ಧತಿ ಇದೆ. ಅದೇನೆಂದರೆ ಜಳಕವನ್ನು ಮಾಡಿ ಕುಸುಮ, ಚಂದನ, ಅಕ್ಷತೆಗಳನ್ನು ಸುವಾಸಿನಿಯರಿಗೆ ನೀಡಿ, 'ಬಾಗಿನ'ವನ್ನು ಕೊಡುವುದು.

'ಬಾಗಿನ' ಎಂಬುದನ್ನು ಗ್ರಾಮೀಣರು 'ಹಿಟ್ಟಕ್ಕಿ' ಎನ್ನುತ್ತಾರೆ. ಅಂದರೆ ಹೊಸ ಚಿಗುರಿನ ತೋರಣವನ್ನು ಕಟ್ಟಿ, ಹಲವು ಬಗೆಯ ಬೆಳೆದ ಧಾನ್ಯಗಳನ್ನೆಲ್ಲ 'ಮೊರ'(ಮರ)ದಲ್ಲಿ ಹಾಕಿ, ವಾದ್ಯಗಳ ನಾದದೊಂದಿಗೆ ಸೂಲಗಿತ್ತಿಯರಿಗೆ ಕೊಡುವ ಪದ್ಧತಿ. ಇಂದಿಗೂ ಇದೆ.

**ಬಾಣಂತಿಯ ವರ್ಣನೆ**

ಬೆಳರ್ತಂಗದಿಂದ ಕೈದಳದಸಿಯ ಪೊಡೆಯಿಂದ
ಬಳಲ್ದ ತನುಮಧ್ಯದಿಂ ತೊರೆವ ಪೆರ್ಮೊಲೆಗಳಿಂ
ನಳ ನಳಿಪ ಕಾಂತಿಯೆಂ, ಸುಳಿನಾಭಿಯಿಂದ ನಳಿತೋಳ್ಗಳಂ ಪೊಳೆವ ಮುಖದಿ
ತೆಳುಗಲ್ಲದಿಂದ ರಾಜಿಪ ನೊಸಲ ತಿಲಕದಿಂ
ತಳತಳಿಪ ಕಣ್ಗಳಾಂಜನದಿಂದ ದಾಡಿಮದ
ಒಳುವಿತ್ತನೇಳಿಸುವ ಪಲ್ಲಳಿಂ ರಾಗಧರದಿ ಬಾಣ್ತೆ ಕಣ್ಗೆಸೆದಳು (೨-೫೮)

ಪ್ರಸವದಿಂದಾಗುವ ದೈಹಿಕ ಬದಲಾವಣೆಗಳ ಚಿತ್ರಣವನ್ನು ಕವಿ ಇಲ್ಲಿ ನೀಡಿದ್ದಾನೆ. ಹೆರಿಗೆ ಆದಾಗಿನಿಂದಲೂ 'ಕುಂಕುಮ'ವನ್ನೆ ಕಾಣದ ಹಣೆ, ಹನ್ನೆರಡನೆಯ ದಿನ (ಗಂಡು ಮಗುವಿನ) ನಾಮಕರಣದಂದು ಇಟ್ಟ ತಿಲಕ ನೊಸಲಲ್ಲಿ ರಾರಾಜಿಸುವ ಪರಿಯನ್ನಿಲ್ಲಿ ತಿಳಿಸುತ್ತಾರೆ.

**ಮಗುವಿನ ವರ್ಣನೆ**

'ಪೊನ್ನೆರಕ ಪುತ್ಥಳಿಯಂತೆಸೆವ ಕುಮಾರ ನೊ ಮುತ್ತೆ ಒಗೆದೆಸೆವ ಬಾಲಕ'

ಹೀಗೆ ಗಂಡು ಮಗು ಜನಿಸಿದ ಸಂತೋಷದಿಂದ ಆವರಿಸಿದ ವಾತಾವರಣವನ್ನು ಹೇಳುತ್ತಾನೆ.

ಕಲ್ಲೇಶನು ಚೋರತನದಿಂದ ಮಗುವನ್ನು ಕದ್ದೊಯ್ದು 'ಶಿಶು ಬಾಯಾರಿಯಳ್ಳಲದೊಲು ಪಚರಿಸುತ, ತಂದು ಕಲ್ಬುರಕೆ ಶಿಶುವನ್ನು ಒಂದು ಪೀಠದಲ್ಲಿ ಮಲಗಿಸಿದ. ಹಗಲು ಬೊಮ್ಮಗೌಡ ಕರೆದೊಯ್ವನು ಕೋಮಲ ಲತೆಯಂತೆ ಶಿಶು ಬೆಳೆಯತೊಡಗಿತು.

ಪೊಡ ಮಗುಳ್ದಂಬೆಗಾಲಿಡುತ ಕೈವಿಡಿದುದ
ಟ್ಟಡಿಯಿಡುತಲೊಯ್ಯನೆ ತೋಳ್ನುಡಿಯ ನಾಡುತಲಿ
ಒಡನೆ ಕುಣಿವುತ ಕಾಲಗೆಜ್ಜೆಯ ನುಡಿಸುತ ಕುಂಡಲವಾಲತಲಿ ತೋಳ್ಗಳ
ಸಡಗರದಲಾಡೆನಲು ಬಿಜ್ಜಳನ ಕೊಲ್ವಪೆ
ರ್ಮುಡುಹುಗಳಿಗಾರೆಣೆಯೆನುತ ತೊರ್ವವೊಲುತೂಗ್ವ
ಬಿಡದೆ ಚೆಂಬಾಯ್ದೆರೆದು ನಗುತ ಪೆತ್ತರ ಪ್ರೀತಿಗಡನು ರ್ವಿಸುತಲಿರ್ಪ. (೩–೨೧)

ಬಿಜ್ಜಳನನ್ನು ಕೊಲ್ಲಲು ಮಗು ಸನ್ನದ್ಧನಾಗತೊಡಗಿತು ಅಂಬೆಗಾಲಿಡುತ, ತೊದಲ್ನುಡಿಯ, ನುಡಿಯತ, ಪುಟ್ಟ ಪುಟ್ಟ ಹೆಜ್ಜೆಯನ್ನಿಡುತ ಕಾಲ್ಗೆಜ್ಜೆ ನುಡಿಸುತ ಬೆಳೆದನು.

ಪುಲಿಯುಗುರು ಪೊನ್ನಪೊಕ್ಕುಳ ಘಂಟೆಯರಳೆಲೆಯು
ಉಲಿವ ಪಾದದ ಪೊನ್ನ ಕಿರುಗಜ್ಜೆ ಮಾಗಾಯಿ
ಒಲೆವ ಕೆಂಜೆಡೆ ಬಿಂದುಲಿಯೆ ಪೊರೆದ ದೂಳದಿಂದೆಳೆಯ ಕಣ್ಗೆಸೆಯೆ ಕಂಡು
ನಗುಮಿಗಲು ಹಿಗ್ಗುವರು ಪಡೆದವರು ಒರ್ಮೊರ್ಮೆ
ಬಳಲುವರು ಸುತನಾದಡೇಂ ಫಲವು ಕಲ್ಬುರದ
ಕಲ್ಲಿನಾಥ ಬೆಂಗೊಂಡು ಕಳುವಿನಿಂದೊವುದಂಮಾಣನ ಕಟಕಟೆನುತಲಿ.(೩–೨೨)

ಹೀಗೆ ಬೆಳವ ಮಗುವಿನ ಆಟ ಕಂಡು ಸಂತೋಷಗೊಳ್ಳುವರು ತಂದೆ ತಾಯಿ ಒಮ್ಮೊಮ್ಮೆ ಸುತನಿದ್ದಡೇ ಏನು ಫಲವು? ಕಲ್ಲಿನಾಥನು ಬೆನ್ನುಬಿಡದೆ ಕಳುವಿನಿಂದ ಮಗುವನ್ನು ಕರೆದೊಯ್ಯುತಿರುವನೆಂದು ಮರುಗುವರು.

ತರುಳನು ಈ ಪರಿಯೊಳು ಬೆಳೆದೇಳಂ
ಟ್ವದುಷದ ಬಾಲಕನಾದನು ಮತಿ ವಿ
ಸ್ತರಮಾಗುತಲಿರ್ದುದು ಮನದೊಳಗೆಯುಮರೆದನು ಇಹಪರದ
ಚರಿತೆಯೊಳಗೆ ಶರಣನ ನಡವಳಿಯಾ
ಚರಿಸುವ ನುಡಿಯೊಳು ಪಂಚಾಕ್ಷರಿಯು
ಚ್ಚರಿಸುವ ಗುರುಲಿಂಗವು ಜಂಗಮಕೊಲಿದೆರಗುವನುರ್ಬುತಲಿ.(೩–೨೩)

ಹಿಗೆ ಮಗುವಿನ ದೈಹಿಕ ಬೆಳವಣಿಗೆಯ ಜೊತೆಗೆ, ಮನಸ್ಸಿನ ಬೆಳವಣಿಗೆಯು ಆಗತೊಡಗಿತು, ಹೀಗೆ ಕಾವ್ಯದಲ್ಲೆಲ್ಲ ವರ್ಣನೆಗಳು ಅಧಿಕವಾಗಿ ಬಳಕೆಗೊಂಡಿವೆ. ಮಗುವಿನ ಅಂತರಿಕ ಹಾಗೂ ದೈಹಿಕ ಬೆಳವಣಿಗೆಯು ತಂದೆ ತಾಯಿಯಲ್ಲಿ ಭಯವನ್ನು ಮೂಢಿಸುವಂತಿದ್ದವು.

**ರಸ ನಿರೂಪನೆ**

ಕವಿಯ ವೀರರಸ, ಶೃಂಗಾರ, ಶೋಕರಸದಂಥ ಜೀವನಾನುಭವಗಳನ್ನು ರಸವತ್ತಾಗಿ ಹೇಳಿದರೂ ಕೂಡ, ಎಲ್ಲ ರಸಗಳು ಕೇಂದ್ರ ರಸವಾದ ಭಕ್ತಿಗೆ ತಲೆಬಾಗಬೇಕಾಗುತ್ತವೆ. ಹೀಗೆ ಶಕ್ತಿಯುತವಾದ ಭಕ್ತಿಯ ಭಾವವನ್ನು ಕಾವ್ಯದಲ್ಲಿ ಯಥೇಚ್ಚವಾಗಿ ಬಳಸಿದ್ದಾನೆ.

ಈ ಕಾವ್ಯದ ಉದ್ದೇಶ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಬಿತ್ತರಿಸುವದು. 'ರಸವಿಲ್ಲದ ಕೃತಿ ಕೃತಿಯೇ ಅಲ್ಲ'. ಹಾಗಾಗಿ ಧೂಪದ ರಾಚೇಶನು ತನ್ನ ಕಾವ್ಯದಲ್ಲಿ ರಸ ನಿರೂಪಣೆ ಮಾಡಿದ್ದಾನೆ.

ಹೃದಯವನ್ನು ಕಲಕಿ ಕಣ್ಣನ್ನು ಹನಿಗೂಡಿಸುವ, ಹೃದಯ ವಿದ್ರಾವಕ ಸನ್ನಿವೇಶಗಳು, ಮನಸಿಗೆ ಬೆರಗನ್ನುಂಟುಮಾಡುವ ಸನ್ನಿವೇಶಗಳು, ಸಂತೋಷವನ್ನು ವ್ಯಕ್ತಪಡಿಸುವ ಸನ್ನಿವೇಶಗಳು, ವೀರವೃತ್ತಿಯನ್ನು ವ್ಯಕ್ತಪಡಿಸುವ ಹಲವಾರು ಸನ್ನಿವೇಶಗಳ ಚಿತ್ರಣ ನೀಡಿದ್ದಾರೆ,

**ಶೋಕರಸ**

ಮಡಿಲಲ್ಲಿ ಮಲಗಿದ ಮಗುವನ್ನು ಕಾಣದ ಕಲ್ಮಮ್ಮಳು ಶೋಕಿಸಿದ ಪರಿಯನ್ನು ಕವಿ ಹೀಗೆ ನಿರೂಪಿಸುತ್ತಾನೆ. ಸಿಡಿಲುತಾಗಿದ ಪ್ರಾಣಿ ಹೇಗೆ ವಿಲವಿಲನೆ ಒದ್ದಾಡುತ್ತದೆಯೋ, ಹಾಗೆ ಕಲ್ಲಮ್ಮ ಮಗುವನ್ನು ಕಾಣದೇ ಒದ್ದಾಡಿದಳು.

ಸಿಡಿಲು ಸೋಂಕಿದ ಮಿಗದವೊಲು ಮಿಡ
ಮಿಡನೆ ಮಿಡಕುತ್ತಾಗ ತೊಪ್ಪನೆ
ಕೆಡವುತವನಿಗೆ ಜೊಂಪಿಸುವ ಜೋಲ್ದಾಂಬಕದಲಾಶ್ರು
ಮಡಿಲಿಟ್ಟೋಣಗುತ್ತಿರಲು ದೀವಿಗೆ
ವಿಡಿದು ಸದನದೊಳರಸಿ ಕಾಣದೆ
ಉಡುಪಮುಖಿ ಕಲ್ಲಮ್ಮನಾಣ್ಮನೆಡಗೆಯೆಯಿದಿ ಮೇಣು. (೩-೭)

ಕರದಿ ಚಿಟುಕಂ ಮುರಿದು ಕೊಳುತಲಿ
ಉರದಿ ಪಾಣೆಯನೊತ್ತಿಕೊಳುತಲಿ
ಗುರುಳು ಪರದೊಲದಾಡೆ ಘರ್ಮಂ ಪೊರಮಡುತ ತನುವಿಂ
ಸುರಿಯುತಲಿ ಕಂಬನಿಯ ಕೊರಲ್ಬ

ಲ್ಸೆರೆಗಳುರ್ವಲು ನುಡಿಗಲಿವಗಿಳಿ

ಮರಿವೊಲು ತೊದಲಿಸುತ ಬಿಕ್ಕುತಲರಚುತಿಂತೆಂದು (೩–೮)

ಅರಚುತ್ತ, ಬಿಕ್ಕುತ್ತ, ಕಲಿಯುವ ಗಿಳಿಮರಿಯಂತೆ ತೊದಲು ನುಡಿಯುತ್ತ ತನ್ನ ಮಡಿಲಿನ ಮಗು ಅದೃಶ್ಯವಾದನ್ನು ತಿಳಿಸಲು ಬೊಮ್ಮಗೌಡನಿಗೆ ಒಡಲಿನಲ್ಲಿ ಕೆಂಡವನ್ನು ಹಾಕಿದಂತಾಗಿ

ಮರೆತ ತನುವಂ ಪುತ್ರಶೋಕದ

ಗರ ಹೊಡೆದುದೆಂಬಂತೆ ಸಂತಸ

ಶರಧಿ ಗೌಡನನುಳಿದು ಪೋರ್ಪೊಲು ಬೆಮರತು ಪರಿಯೆ

ಇರದೆ ಇನಿಸೊತ್ತಿಂಗೆ ಎಚ್ಚ

ತ್ತುರೆ ಮರುಗುತಾಶ್ರುವು ತುಳುಂಕುತ

ಕರದಿ ದೊರಕಿದ ಪರುಷ ಪೋಪದರಿದುಮಭವಯೆಂದು.(೩–೧೦)

'ಕೈಗೆ ಸಿಕ್ಕ ಮಾಣಿಕ್ಯ ಕಳೆದಂತೆ ಮಗುವನ್ನು ಕಾಣದ ದಂಪತಿಗಳಿಬ್ಬರು ಶೋಕಿಸಿದರು. ಪುತ್ರಶೋಕದ ಗರ ಬಡಿದು, ಸಂತೋಷವು ದೂರ ಸರಿಯೇ ಮರುಗುತ್ತ ಕಣ್ಣಿರೀಟ್ಟರು. ಹೀಗೆ ಕಾವ್ಯದಲ್ಲಿ ಶೋಕರಸವು ಹರಿದು ಬಂದಿದೆ.

**ಶೃಂಗಾರ ರಸ**

ಇಲ್ಲಿ ಕವಿ ಧೂಪದ ರಾಚೇಶನು ಸ್ತ್ರೀಯರ ವರ್ಣನೆ, ಸೂಳೆಯರ ವರ್ಣನೆಯನ್ನು ಮಾಡುವಾಗ ಹೆಚ್ಚಾಗಿ ಶೃಂಗಾರರಸದ ಅನುಭೂತಿಯಾಗುತ್ತದೆ. ಸ್ತ್ರಿಯರ ಕಾಮಾತುರತೆ, ಭೋಗ ಸುಖಿಗಳ ಕಾಮಾತುರತೆಯನ್ನು ಬಿಂಬಿಸುತ್ತಾನೆ. ಮದುವೆಯ ಸಂದರ್ಭ ವಿವರಣೆಯ ಜೊತೆಗೆ ಶೃಂಗಾರ ರಸವನ್ನು ಬಣ್ಣಿಸುತ್ತಾನೆ.

ಅಸುಗೆಯೆಳೆದಳಿರ ಚೆಂದಾವರೆಯೆಲರೊಳಗೊಂ

ದಿಸುವಂತೆ ಕಾಮನೃಪ ಸುತೆಯ ಕರಮಂ ತಂದು

ರಿಸುಳಿಗಂಧನ ಕೈದಳದೊಳಗಿಟ್ಟನು ಒಲಿದು ಪೊಂಗಳಸದೋದಕವನು.(೭–೨೯)

ಕಾಮ್ಯನೃಪನಾದ ಬೊಮ್ಮಯ್ಯ ಹೇಗೆ ಕನ್ಯೆಯನ್ನು ಮಂಟಪಕ್ಕೆ ಕರೆತಂದನೆಂದು ತಿಳಿಸುತ್ತಾನೆ.

ಪುಣ್ಯಮಯ ಚಂದಿರನೆನಲು ರಾಜಿಸುವ ಬೆಳು

ವರ್ಣ್ಣದುರೆ ಹರಿವಾಣದೊಳಗೆಯು ಉಣಲ್ಬಡಿಸಿ

ದಣ್ಣಿವಾಲ್ವಯ ಸಮೇತಣ್ಣದಿರುಮೆನಲುಮಾ ಸೀತಕಿರಣಮನುಣುತಿಹ

ಜೊನ್ನವಕ್ಕಿಯ ಮಿಥುನಮೆನಲು ಗಿರುಸುತೆಯ ಮನ

ದನ್ನನಣುಗಂ ಮೊಲ್ಲೆಬೊಮ್ಮಯ್ಯ ಪುಲ್ಲೆಗರು

ಗಣ್ಣ ಪಂಪಾದೇವಿಯರು ಕೂಡಿ ಸಲಿಸಿದರುಮುನ್ನಂತ ಹರುಷದಿಂದ. (೭–೩೩)

ಹೀಗೆ ಬಹು ದೀರ್ಘವಾಗಿ ಶೃಂಗಾರ ರಸವನ್ನು ವರ್ಣಿಸಲಾಗಿದೆ. ನಮ್ಮ ಕಾವ್ಯದ ನಾಯಕನೂ ಶೃಂಗಾರ ಪ್ರಿಯನಾಗಿದ್ದಾನೆ.

**ಭಕ್ತರಸ ವರ್ಣನೆ**

ಕಾವ್ಯದ ತುಂಬೆಲ್ಲ 'ಭಕ್ತರಸ'ವು ಉಕ್ಕಿಹರಿದಿದೆ. ಮೊಲ್ಲೆಬೊಮ್ಮಯ್ಯನು ಕಲ್ಲೂರಿನ ಕಲ್ಲೇಶ್ವರನನ್ನು ಪೂಜಿಸುವ ಸಂದರ್ಭವನ್ನಿಲ್ಲ ತಿಳಿಸುತ್ತಾರೆ.

ಉದಯದಲಿ ಎದ್ದು ಕಲ್ಲಮನಾಥಯುಗ್ಮಪದ

ಪದುಮಂಗಳಂ ಜಾನಿಸುತಲಿ ಪೂದೊಂಟಕ್ಕೆ

ಸದು ವಿನಯದಿಂ ಪೋಗುತಲಿ ತೋಂಟಮಮ

ದೂರದಿಂ ಕಂಡು ಪೊಂಪುಳಿಸುತೆ

ಮುದದೆ ದೂರದ ಪೂವ ಕಲ್ಲೇಶಗರ್ಪಿಸುತ

ಸದಮಳ ಪರಿಮಳಂ ಬರಲು ಕಲ್ಲಮಗೆ ಸ

ಒದವಿ ಕಣ್ಣಿನಿದಾದ ನಿಲುಕದಿಹ ಪಲ್ಲವವ

ಕಲ್ಲಿನಾಥಗೆ ಸಲಿಸುತ (೪–೩)

ಸೂರ್ಯ ಕಿರಣಗಳು ಬಂದು ಹೂವ ಮುಟ್ಟುವ ಪೂರ್ವದಲ್ಲಿಯೇ, ಗಾಳಿಬಂದು ಹೂವ ಸೋಂಕುವ ಪೂರ್ವದಲ್ಲಿಯೇ, ಹೋಗಿ ಹೂವನ್ನು ತರುತ್ತಿದ್ದನು. ಹೀಗೆ ಬಗೆಬಗೆಯ ಹೂವುಗಳಾದ ಮರುಗ, ಕೇದಗೆ, ಪಾರಿಜಾತ, ಸುರಹೊನ್ನೆ ಅಶೋಕ, ಬಕುಳ, ಇರವಂತಿ, ದವನ, ಮಲ್ಲಿಗೆ, ಸೇವಂತಿ ವಿಧ ವಿಧ ಹೂವು, ಪತ್ರೆ, ಚಂದನ, ಗಂಧ, ಅಕ್ಷತೆ, ಧೂಪ, ದೀಪವನ್ನು ಬೆಳಗಿ ತಾಂಬೂಲವನ್ನು, ನೈವೇದ್ಯವನ್ನು ಅರ್ಪಿಸುತ್ತಿದ್ದನು. ಇಲ್ಲಿಯ ಮೊಲ್ಲೆಬೊಮ್ಮಯ್ಯನು ಹರಹರನನ್ನು ನೆನಪಿಸುತ್ತಾನೆ.

ತೋಂಟಮನುತ್ಸವದಿ ಪೊಕ್ಕು ರವಿಕರಂ

ಪೊಂದಿ ಕನಲದ ಮರುತನಲಗೆ ಬೀ ಸರಬೋಗ

ದಿಂದೀರಾ ಅಳಿಯು ತೊತ್ತಳಂದುಳಿದು ಬಂದೋಡದ

ಬಿಸುಮಮಲ್ಲದೆ ಮುಂದೆ ಬಿರ್ಚದ ಪಸುರಳಿಯದ ಮಗುಳಲ್ಲದೊಲ

ವಿಂದಲರೆವಿರಿದ ಮೊಗ್ಗೆಗ ಬಂದುಗೆಗಳಂ

ನಂದಿವರ್ತಂ ಕಂಚಿಯಾಲ ಪಚ್ಚೆಯು ಶ್ವೇತದುರ್ವಿಯಂ ಕಗ್ಗೊರಟಿಯು (೪,೫)

ಹಾಗೆಯೇ ಬೊಮ್ಮಯ್ಯನು ವೀಣೆ ನುಡಿಸುತ್ತಾ ಕಲ್ಲೆಶನಿಗೆ ತನ್ನ ಭಕ್ತಿಯನ್ನಪಿಸುತ್ತಿದ್ದನು.

ಹರುಷದಿಂದ ಉದಯದಲ್ಲಿ ಎದ್ದು, ಬೊಮ್ಮಯ್ಯನು ಹರನ ಅರ್ಚನೆ ಮಾಡಿ, ವೀಣೆಯನ್ನು ತೆಗೆದುಕೊಂಡು ಕಲ್ಲೇಶ್ವರನಾಲಯಕ್ಕೆ ಹೋಗಿ, ವಂದಿಸಿ 'ಸರಿಗಮಪದನಿಸ' ಎಂಬ ಸಪ್ತಸ್ವರಗಳನ್ನು, ಮುವತ್ತೇರಡು ರಾಗದಿಂದ, ಅರವತ್ತನಾಲ್ಕು ಮಿಶ್ರಗಳಿಂದ ಶಿವಗೀತೆಯನ್ನು, ಶಿವಪ್ರಬಂಧವನ್ನು, ಶಿವಾಗಮ ಶಾಸ್ತ್ರವನ್ನು ಶಿವಭಕ್ತರುಗಳ ಚಾರಿತ್ರವ್ನನು ಹಾಡಿ, ಕೊಂಡಾಡಿ ನುಡಿಸಿ ಶಿವನಿಗೆ ಭಕ್ತಿಯನ್ನು ಸಲ್ಲಿಸುತ್ತಿದ್ದನು.

ಹರಳಯ್ಯನು 'ಶರಣಾರ್ಥಿ'ಯೆಂದು ಬಸವೇಶನಿಗೆ ನಮಸ್ಕರಿಸಲು ಆಗ ಬಸವೇಶನು 'ಶರಣು ಶರಣಾರ್ಥಿ' ಎನ್ನಲು, ಅದನ್ನು ಕೇಳಿದ ಹರಳಯ್ಯ ಮನದೊಳಗೆ ಚಿಂತಿಸುತ್ತ 'ವಂದನೆಯೊಂದು ಘನಭಾರಮಾದುದೆಂದೆನುತ' ಚಿಂತಿಸಿ ಪತ್ನಿಗೆ ಹೇಳಲು ಕಲ್ಯಾಣಮ್ಮ

ಕಥನಮುಂಟು ನಿಮ್ಮ ರೂಪನು ಬಲದಿನಮ್ಮರೂ

ಪನು ಎಡದ ಪಾದುಕೆಯೊಳಗಿಟ್ಟು ವರಪಾದುಕಿಂಕಿತಗೆಯ್ಯೆ ಭಾರಮಿಳಿದು(೧೫–೪೦)

ಎಂದು ಸಂತೋಷದಿಂದ.

ಪಾದುಕೆಗಳನ್ನು ಮಾಡಿ, ತಲೆಯ ಮೇಲಿಟ್ಟುಕೊಂಡು, ಬಸವೇಶನೆಡೆಗೆ ಬರುತ್ತಾನೆ. ಇದು 'ಗುಪ್ತ ಶರಣನ' ಗುಪ್ತ ಭಕ್ತಿಯ' ಪರಾಕಾಷ್ಠೆಯನ್ನು ಬಿಂಬಿಸುತ್ತದೆ. ಭಕ್ತಿಯನ್ನೆ ಉಸಿರಾಗಿಸಿಕೊಂಡು ಬದುಕಿದ ಶರಣರು, ಧರ್ಮ, ಕಾಯಕಗಳಲ್ಲಿ ನಿರಂತರವಾಗಿ ಧರ್ಮದೀವಿಗೆಯನ್ನು ಬೆಳಗಿ ಭಕ್ತಿಯ ಸತ್ವವನ್ನು ಮೆರೆದರು.

**ವೀರರಸ**

ಜಗದೇವ-ಮೊಲ್ಲೆಬೊಮ್ಮರು ಬಿಜ್ಜಳನನ್ನು ಕೊಲೆ ಮಾಡುವ ಸಂದರ್ಭವನ್ನು ವಿವರಿಸುವಾಗ ಕವಿ ವೀರರಸವನ್ನು ಬಿಂಬಿಸಿದ್ದಾನೆ. ಶರಣರಿಬ್ಬರು

'ಮೋಸಮಂ ಮನದೊಳಗೆ ಜಾನಸಿ

ಆ ಸಮಯದೊಳಗಿರಿವುದುಚಿತವೆನ್ನುತ್ತ ಮಾತಾಡಿ

ರೋಷದಿಂ ರುದ್ರಾವತಾರಮ

ನಾ ಶರಣರಾನುತ್ತೆ ಉಗಿಯಲೊ

ಈಶನಿಂದಕ ಭಕ್ತ ಕೊಲೆಯನೆನುತ್ತಲಾರ್ಭಟಿಸಿ' (೧೭–೫೩)

ರುದ್ರಾವತಾರವನ್ನು ತಾಳಿದ ಭಕ್ತರು, ಆರ್ಭಟಿಸಿದರು, ದೀವಟಿಗೆಯಲ್ಲಿ ಅಡಗಿದ ಖಡ್ಗವನ್ನು ಸರ್ರನೆ ತೆಗೆದು, ಶರಣರು ಭೂವರನ ಹೊಟ್ಟೆಯಲ್ಲಿ ಇರಿದರು. ತ್ರಿವಿಧ ಲೋಚನನಾದ 'ಶಿವ ನಿಂದಕ'ನನ್ನು ಕೊಂದರು, ಬಿಜ್ಜಳನ ಒಡಲನ್ನು ಸೀಳಿ, ಭಕ್ತದ್ರೋಹಿಯ ಕೊಲೆಯನ್ನು ಮಾಡಿದೇವೆಂದು ಸಂತೋಷದಿಂದ ಆರ್ಭಟಿಸಿ, ಕೂಗುತ್ತ ಪಂಜನ್ನು ತೊರೆದರು.

ಹೀಗೆ ಕಾವ್ಯದಲ್ಲೆಲ್ಲ ಕವಿಯು ಶೋಕರಸ, ಶೃಂಗಾರ ರಸ, ಭಕ್ತಿರಸ, ವೀರರಸಗಳನ್ನೆಲ್ಲ ಮೇಳೈಸಿದಾನೆ. ನವರಸಗಳಲ್ಲಿ ಭಕ್ತರಸಕ್ಕೆ ಸ್ಥಾನ ಇಲ್ಲ ಆದರೆ ೧೨ನೇ ಶತಮಾನದಲ್ಲಿ ಬಹುಮುಖ್ಯವಾಗಿ ಗುರುತಿಸಲಾದ ರಸವಾಗಿ 'ಭಕ್ತರಸ' ನಿಲ್ಲುತ್ತದೆ. ಹೀಗೆ ಕಾವ್ಯದಲ್ಲೆಲ್ಲ ಭಕ್ತರಸ ಪ್ರಧಾನವಾಗಿದೆ. ಅಲ್ಲದೆ ಉಳಿದೆಲ್ಲ ರಸಗಳು ಭಕ್ತಿರಸಕ್ಕೆ ತಲೆಬಾಗುಂತಾಗಿದೆ. ಹೀಗಾಗಿ ಕಾವ್ಯದಲ್ಲೆಲ್ಲ 'ಭಕ್ತರಸ'ವೇ ಮೇಲುಗೈ ಸಾಧಿಸಿದೆ ಕವಿಯು ಭಕ್ತಯ ಭಾವವನ್ನು ಕಾವ್ಯದಲ್ಲಿ ಯಥೇಚ್ಛವಾಗಿ ಬಳಸಿದ್ದಾನೆ.

**೪.೪. ಗಾದೆಮಾತುಗಳು**

ಜನಪದರು ಮಾತನಾಡುವ ಮಾತಿಗೆ ಮಹತ್ವವನ್ನು ತಂದು ಕೊಡುವ ಉದ್ದೇಶದಿಂದ ಕೆಲವು ಪದ ಪುಂಜಗಳನ್ನು ಬಳಸುತ್ತಾರೆ. ಗಾದೆಗಳಲ್ಲಿ ತಿಕ್ಷ್ಣತೆ ಇರುತ್ತದೆ. ಗಾದೆಗಳು ಚಿಕ್ಕವಿದ್ದು, ಅಪಾರವಾದ ಅರ್ಥವನ್ನು ನೀಡುತ್ತವೆ. 'ಗಾದೆ' ಎಂಬುದು ಸಂಸ್ಕೃತದ 'ಗಾಥ'ದಿಂದ, ಪ್ರಾಕೃತದ 'ಗಾಹೆ'ಯಿಂದ, ಕನ್ನಡದಲ್ಲಿ 'ಗಾದೆ' ಬಂದಿದೆ. ಇಂಗ್ಲೀಷನಲ್ಲಿ `Proverb' ಎನ್ನುವರು. ಗಾದೆಗೆ ಪರ್ಯಾಯವಾಗಿ ನಾಣ್ಣುಡಿ, ಲೋಕೊಕ್ತಿ, ಪ್ರಾಚೀನೋಕ್ತಿ ಇತ್ಯಾದಿಯಾಗಿ ಕರೆಯುತ್ತಾರೆ. ಪ್ರಸಂಗಾನುಸಾರವಾಗಿ ಕವಿಯು ಜಾಣ್ನುಡಿ ನಾಣ್ಣುಡಿಗಳನ್ನು ಕಾವ್ಯದಲ್ಲಿ ಬಳಸುತ್ತ, ದೇಸಿಯ ಬೆಡಗನ್ನು ಹೆಚ್ಚಿಸಿದ್ದಾನೆ. ರನ್ನ ವಾಗ್ದೇವಿಯ ಭಂಡಾರವನ್ನು ಕೊಳ್ಳೆಹೊಡೆದರೆ, ಕವಿ ಧೂಪದ ರಾಚೇಶ ಆಡುಮಾತಿನ ಭಂಡಾರವನ್ನು ಕೊಳ್ಳೆ ಹೊಡೆದಿದ್ದಾನೆ. ದೇಶಿಯ ಶಬ್ದಗಳು, ಗಾದೆಗಳಿಂದ, ಸಂವಾದ ರಚನೆಯಿಂದ ಶೈಲಿಯ ನಿರಾಡಂಬರತೆಯಿಂದ ಆತನ ಕಾವ್ಯವು ಸೊಗಸುತ್ತದೆ.

ನಾಣ್ಣುಡಿಗಳು ಜನವಾಣಿಯ ಪ್ರತೀಕವಾಗಿವೆ. ಭೋಗಲಂಪಟನ ಪರಿಯನ್ನು ಕವಿ ಹೀಗೆ ಹೇಳುತ್ತಾನೆ. 'ಇನಿಯಳು ಮುಳಿದಳೆಂದು ವಿಟ ಕಾಲ್ಪಿಡಿದುಳ ಕಲುಷಮನ ವುಳಿಯೆನಲುವಳು' 'ಮುನಿದೆತ್ತ ಮೆಟ್ಟದೊಡೆ ಎತ್ತ ಚಪ್ಪಟೆಯಹುದು ಫಣಿ'(೪–೪೭) 'ಗಜದಿದರ ಶುನಕನಾರ್ಭಕನೊಳ್ಪುತಿರೆ'(೧೦–೩೪) 'ಪಾಲುಂಡು ಎರಳೆಗರು ಮನದೊಳಗೆ ಲಂಘುಸುತಿರಲ'(೨–೩), 'ಫಣಿ ಕೊಳಲರವಕೆ ತಲೆದೂಗುವಂತೆ'(೧೭–೨), 'ಸೂರತ್ನ ಹಾರವ ತಂದು ಮರ್ಕಟನ ಕೊರಳೊಳಗೆ ಅಮರ್ಚಿದೊಲು'(೫–೧೬), 'ಅನಲನ ತಂದೊಡಲೊಳಗೆ ಪೊಯಿದಂತಾಯ್ತು'(೨–೯), 'ಕೃಪೆಯುಳ್ಳವರಿಗೆಯುಮಪಜಯವುಂಟೆ?(೧೬–೫೪), 'ಉನ್ನತ ದರಿದ್ರಂಗೆ ಕಡವರ ದೊರಕಿದೊಲು'(೧೩–೧೮), 'ಒಳಗುಣಮುಮುಳ್ಳವರಿಗೆ ಊನ್ಯಮಾದೊಡೆಯವರ್ಗಳ ಸಂಗಮಂ ಬಿಡರು'(೭–೪೩), 'ಮೈಯಲ್ಲ ಕಣ್ಣಳಂದಳೆ'(೧೭–೨೧), 'ಬಡವರಿಗೆ ನೃಪರು ಪೆಣ್ಗೊಡುವರೆ'?(೪–೧೩), 'ಕರ ಬಡವನಾಗಿರ್ದವನಿಗೆ ಗೈ ವಣ್ಣವೂ ದೊರಕಿದಂದದಿ'(೪–೪೨), 'ಕೋವಿದರು ಅರ್ತಿಯಲಿ ಸವಿನೋಡಿದರುವುದಕ್ಕಾನು

ಬೇಡವುಯೆನಬಹುದೇ'?(೪–೪೪), 'ಹೊಸ ನೀರಹುದಿ ಮಿನ್ ಪಳಚಿದಂತೆ'(೧–೪೪), 'ಧಾತ್ರಿಯೊಳು ನಮ್ಮರಕೆ ಲತೆಮುಟ್ಟಿ ಕೈಲಾಸಕಡರ್ವಂದದಿ'(೧೩–೨೦), 'ಪುರುಷರುಂ ಕರೆದ ನಾಮವನು ಉಲ್ಲಂಘಿಸುವ ಉರೆವೆಣ್ಣುಗಳುಂಟೆ'?(೨–೫೬),'ಎಣ್ಣೆ ಉಸುಬಿನೊಳೊಕ್ಕತೆರನಹುದು' (೪–೧೦).

ಹೀಗೆ ಕವಿ ಧೂಪದ ರಾಚೇಶನು ಹಲವಾರು ಉಪಮೆಗಳನ್ನು ಬಳಸಿದ್ದಾನೆ. ಇದರಿಂದ ಕವಿಯ ಲೋಕಾನುಭವದ ಸೂಕ್ಷ್ಮದರ್ಶನವಾಗಿತ್ತದೆ. ಈತ ಬಳಸಿರುವ ನೂರಾರು ನಾಣ್ನುಡಿ, ಜಾಣ್ನುಡಿಗಳಲ್ಲಿ ಅರ್ಥವತ್ತತೆ, ಲೋಕವ್ಯವಹಾರ ಜ್ಞಾನ, ಕನ್ನಡ ನುಡಿಯ ಬಗೆಗೆ ಅವನಿಗಿರುವ ಒಲವು ಕಂಡುಬರುತ್ತದೆ. ದೇಶಿಯತೆಯನ್ನು ಕಾವ್ಯದಲ್ಲಿ ತರಲು ಬಯಸಿ, ಆಡುಮಾತಿನ ಶೈಲಿಯನ್ನೇ ಬಳಸಿದ್ದಾನೆ. ಹೀಗಾಗಿ ಇದೊಂದು ದೇಶಿಯ ಕಾವ್ಯವಾಗಿದೆ.

* * *

ಕಾಲಗರ್ಭದಲ್ಲಿ ಹುದುಗಿ ಹೋಗಿರುವ ಯಾವುದೇ ಘಟನೆ, ವ್ಯಕ್ತಿಯನ್ನು ಕುರಿತು ಅಧ್ಯಯನ ಮಾಡಲು ಆ ಕಾಲದ ಸಮಕಾಲೀನ ಪರಿಸರದ ಅರಿವು ನಮಗಿರಬೇಕು. ಹಾಗೆಯೇ ಸಮಕಾಲೀನ ಜನ ಸಮೂಹವೊಂದು ಆ ಘಟನೆಯನ್ನಾಗಲೀ ಅಥವಾ ವ್ಯಕ್ತಿಯನ್ನಾಗಲಿ ಒಪ್ಪಿಕೊಂಡಿರಲೇಬೇಕು. ಹಾಗಾದಾಗ ಮಾತ್ರ ಆ ಘಟನೆ ಒಂದು ಸೀಮಿತ ಪ್ರದೇಶದ್ದಾಗಿರದೇ, ಸಾರ್ವತ್ರಿಕ ರೂಪವನ್ನು ಪಡೆಯಲು ಸಾಧ್ಯವಾಗುತ್ತದೆ. ಈ ಕಾವ್ಯದಲ್ಲೂ ಕೂಡ ಒಂದು ವ್ಯವಸ್ಥೆಯನ್ನು ಒಪ್ಪಿತ ಶರಣರ ಗುಂಪೊಂದು ಇದ್ದು. ತನ್ನ ತಾತ್ವಿಕ ವಿಚಾರಗಳನ್ನು ಆದರ್ಶಗಳನ್ನು ಸಾರ್ವತ್ರಿಕಗೊಳಿಸಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ.

ಒಂದು 'ಕೃತಿ' ಎಂದರೆ ಅದು ಆ ಕಾಲಘಟ್ಟದ ಸಾಂಸ್ಕೃತಿಕ ಪ್ರತಿನಿಧಿ ಒಟ್ಟಾರೆಯಾಗಿ ಇಡೀ ಸಮಾಜದ ಸಾಮಾಜಿಕ, ರಾಜಕೀಯ, ಧಾರ್ಮಿಕ, ವೈಪರಿತ್ಯಗಳನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡ ಕೃತಿಗಳು ಮೇಲ್ನೋಟಕ್ಕೆ ಹಾಳು ಪುರಾಣ ಕಂತೆಯಂತೆ ಕಂಡರೂ ತನ್ನ ಗರ್ಭದಲ್ಲಿ ರಾಜಕೀಯ ವೈರುಧ್ಯತೆಗಳನ್ನು ಧಾರ್ಮಿಕ ಸಂಘರ್ಷವನ್ನು, ಸಾಮಾಜಿಕ ತಾಕಲಾಟಗಳನ್ನೆಲ್ಲ ಅಡಗಿಸಿಕೊಂಡಿರುತ್ತದೆ.

ಪ್ರಸ್ತುತ ಕೃತಿಯು ಒಬ್ಬ ಸಾಮಾನ್ಯ ಶರಣ, ಶಿವಭಕ್ತನ ಜೀವನವನ್ನು ಅನಾವರಣಗೊಳಿಸುತ್ತಾ ಸಾಗಿ, ೧೨ನೇ ಶತಮಾನದ ಪ್ರಮುಖ ಘಟನೆಯತ್ತ ಬೆರಳು ಮಾಡುತ್ತದೆ. ಆ ಪ್ರಮುಖ ಘಟನೆ ಯಾವುದು? ಯಾಕಾಗಿ ಇಂಥ ಘಟನೆ ನಡೆಯಿತು? ಎಂಬೆಲ್ಲಾ ಪ್ರಶ್ನೆಗಳಿಗೆ ಫಲಿತಗಳನ್ನು ಕಂಡುಕೊಳ್ಳುವ ಹುಡುಕಾಟವೇ ಈ ಸಂಶೋಧನೆಯಾಗಿದೆ. ಈ ಸಮಗ್ರ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಅಧ್ಯಯನದ ಮಿತಿಗಳು ಮತ್ತು ಅಧ್ಯಯನದ ಮುಂದಿನ ಸಾಧ್ಯತೆಗಳು ಹೀಗಿವೆ.

ವಚನ ಸಾಹಿತ್ಯ ಬಹುಮುಖಿಯಾದದು ಒಬ್ಬ ಶಿವಭಕ್ತನಿಂದ ಕೊಲೆಯಾಗುವ ಬಿಜ್ಜಳ, ರಾಜಕೀಯ ಸ್ಥಿತ್ಯಂತರಗಳು ಹಾಗೆಯೇ ಮೊಲ್ಲೆಬೊಮ್ಮಯ್ಯನ ವ್ಯಕ್ತಿತ್ವ ಆತನ ಆಚಾರ ವಿಚಾರಗಳು, ಅವನ ಆದರ್ಶ ಹಾಗೂ ಬದುಕಿನ ಧ್ಯೇಯ, ಧರ್ಮ, ರಕ್ಷಣೆ, ಸ್ವಧರ್ಮ ರಕ್ಷಣೆಗಾಗಿ ಪ್ರಾಣತ್ಯಾಗಕ್ಕೂ ಸಿದ್ದ ಪ್ರಾಣ ತೆಗೆಯಲು ಸಿದ್ದ, ಇಂಥ ಶರಣನೊಬ್ಬನನ್ನು ಹಲವಾರು ಕಾವ್ಯಗಳು ಚಿತ್ರಿಸಿದ ಬಗೆ ಹಾಗೂ ಈ ಕಾವ್ಯದಲ್ಲಿ ಮೂಡಿಬಂದ ಮೊಲ್ಲೆಬೊಮ್ಮಯ್ಯರ ಚಿತ್ರಣದ ಬಗೆ ಎರಡನ್ನು ಇಲ್ಲಿ ಅಭ್ಯಸಿಸಲಾಗಿದೆ.

ಮೊಲ್ಲೆಬೊಮ್ಮಯ್ಯ ಒಬ್ಬ ಪವಾಡ ಪುರುಷನಾಗಿ ಚಿತ್ರಣಗೊಂಡರೂ ಸಂಪೂರ್ಣ ವಾಸ್ತವಿಕತೆಯಿಂದ ದೂರವಾಗಿಲ್ಲ ಕವಿ ಚಿತ್ರಿಸಿದ ಕಾಲ್ಪನಿಕತೆ ಹಾಗೂ ವೈಭವೀಕರಣವನ್ನು ಕೈ ಬಿಟ್ಟರೆ ಶರಣರ ವಾಸ್ತವಿಕ ಬದುಕು ಹಾಗೂ ಜೀವನ ಮೌಲ್ಯಗಳು ಅನಾವರಣಗೊಳ್ಳುತ್ತವೆ. ಮೊಲ್ಲೆಬೊಮ್ಮಯ್ಯರ ಕಾವ್ಯ ಕೇವಲ ಮೊಲ್ಲೆಬೊಮ್ಮಯ್ಯರ ಕಥೆಯನ್ನು ಮಾತ್ರ ಒಳಗೊಂಡಿಲ್ಲ ಬದಲಾಗಿ ಸಮಕಾಲೀನರಾಗಿ ಬದುಕಿದ ಶಿವಶರಣರ ಹಾಗೂ ಚಳುವಳಿಗೆ ಕಾರಣವಾದ ವಾಸ್ತವ ಸಂಗತಿಗಳನ್ನೆಲ್ಲಾ ತನ್ನೊಡಲಿನಲ್ಲಿ ಅಡಗಿಸಿಕೊಂಡಿದೆ.

೧೨ನೇ ಶತಮಾನದಲ್ಲಾದ ಧಾರ್ಮಿಕ ಚಳುವಳಿಯ ಪ್ರಭಾವ ೧೨ನೇ ಶತಮಾನ ಅಷ್ಟೇ ಏಕೆ? ಇಂದಿಗೂ ಕೂಡ ಕಥೆ, ನಾಟಕ, ಕಾದಂಬರಿ ಇತ್ಯಾದಿ ಪ್ರಕಾರಗಳಲ್ಲಿ ರಚನೆಗೊಳ್ಳುವ ವಸ್ತು ಇದೇ ಆಗಿದೆ.

ಕಲ್ಯಾಣಿ ಕಲಚೂರ್ಯರ ಕಾಲದಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಬದಲಾವಣೆಗಳಾದವು. ಇಂಥ ಬದಲಾವಣೆಗಳಿಗೆಲ್ಲಾ ೧೨ನೆ ಶತಮಾನದಲ್ಲಾದ ಚಳುವಳಿಯೇ ಕಾರಣವಾಯ್ತು. ಕವಿ ತನ್ನ ಕಾಲದ ನಿರೀಕ್ಷೆ, ಪ್ರೇರಣೆ ಮತ್ತು ತನ್ನ ಆಶಯವನ್ನಿಲ್ಲಿ ವ್ಯಕ್ತಪಡಿಸಿದ್ದಾನೆ. ಕವಿ ೧೨ನೇ ಶತಮಾನದ ಕಾಲಘಟ್ಟದಲ್ಲಿ ಬದುಕಿ ಬಾಳಿದವನಲ್ಲ. ಆದರೆ ಆ ಪ್ರಭಾವಕ್ಕೆ ಒಳಗಾಗಿದ್ದವನು ಎಂಬುದು ಸ್ಪಷ್ಟ ಹೀಗಾಗಿ ಈ ಕಾಲಘಟ್ಟದ ಸುತ್ತ ಹೆಣೆಯಲ್ಪಟ್ಟ ಜನಪದರ ಕಥೆಯನ್ನಾಧರಿಸಿ ಕವಿ ಇಲ್ಲಿ ಕಾವ್ಯ ರಚಿಸಿದ್ದಾನೆ.

ಕಾವ್ಯದಲ್ಲಿ ಮೊಲ್ಲೆಬೊಮ್ಮಯ್ಯ ಕಾವ್ಯನಾಯಕನಾಗಿ ಚಿತ್ರಿತಗೊಂಡರೆ, ಈತನ ಕಥೆಗೆ ಪೂರಕವಾಗಿ ಜಗದೇವ, ಹರಳಯ್ಯ, ಮಧುವರಸ, ಬಸವಣ್ಣನವರ ಕಥೆಗಳು ಬರುತ್ತವೆ. ಬಿಜ್ಜಳರಾಯನನ್ನು ಖಳನಾಯಕನಾಗಿಯೂ, ಕೊಂಡಿಮಂಚಣ್ಣನನ್ನು ಚಾಡಿಕೋರನಾಗಿಯೂ ಚಿತ್ರಿಸಲಾಗಿದೆ ಹಾಗೆಯೇ ಇಲ್ಲಿ ಸ್ತ್ರೀ ಸಮಾನತೆ ಹಾಗೂ ಸ್ತ್ರೀಯರಿಗೆ ಗೌರವವಿದ್ದುದು ಕಂಡುಬರುತ್ತದೆ.

ಬಿಜ್ಜಳರಾಯನ ಕೊಲೆಗೆ ಕಾರಣನಾದ ಮೊಲ್ಲೆಬೊಮ್ಮಯ್ಯ ವೀರ ಶಿವಭಕ್ತನಾಗಿ ಚಿತ್ರಣಗೊಂಡಿದ್ದಾನೆ.

ಈ ಸಂಪ್ರಬಂಧದಲ್ಲಿ ನಡೆದ ಅಧ್ಯಯನವು ಕಂಡುಕೊಂಡ ಫಲಿತದ ಜೊತೆಗೆ ಮತ್ತೆ ಅನೇಕ ಪ್ರಶ್ನೆಗಳನ್ನು ಹುಟ್ಟು ಹಾಕಿದೆ. ಅಧ್ಯಯನಕ್ಕೆ ಕೊನೆ ಎಂಬುದಿಲ್ಲ. ಹೀಗಾಗಿ ಈ ಕಾವ್ಯದ ವಿವಿಧ ಆಯಾಮಗಳನ್ನು ಶೋಧಿಸಲು ಮುಂದಿನ ಅಧ್ಯಯನಕಾರರಿಗೆ ಕಾವ್ಯ ದಾರಿ ಮಾಡಿಕೊಟ್ಟಿದೆ.

ಬಿಜ್ಜಳನನ್ನು ಕೊಂದ ಜಗದೇವ ಮತ್ತು ಮೊಲ್ಲೆಬೊಮ್ಮಯ್ಯರು ಶಿವನಾಜ್ಞೆಯಂತೆ ಓರೆಂಗಲ್ಲಿನ ಕಾಕತೀಯ ಗವಚೇಪುರದಲ್ಲಿ "ಗುಂಡ ಬ್ರಹ್ಮಯ್ಯ"ರಾಗಿ ಜನಿಸಿದರೆಂಬ ಪ್ರತೀತಿ ವೀರಶೈವ ಪುರಾಣಗಳಲ್ಲಿದೆ. ಇವರದು ಮೊರೆಹೊಕ್ಕವರನ್ನು ಕಾಯುವ ಕರ್ತವ್ಯ. ಜಗದೇವ, ಮೊಲ್ಲೆಬೊಮ್ಮಯ್ಯರ ಧರ್ಮ ರಕ್ಷಣೆಯ ಕಾರ್ಯದ ಮುಂದುವರಿಕೆಯ ಭಾಗವಾಗಿ ಗುಂಡಬ್ರಹ್ಮಯ್ಯರ ಚರಿತ್ರೆ ಮೂಡಿಬರುತ್ತದೆ.

ಈ ಅಧ್ಯಯನಕ್ಕೆ ಬಳಸಿಕೊಂಡ ಕಾವ್ಯಗಳು ಅನೇಕ. ವಸ್ತುವಿನ ಪುನರಾವರ್ತನೆಯಾಗುವುದಕ್ಕಾಗಿಯೇ ಕೆಲವೊಂದು ಕಾವ್ಯಗಳನ್ನು ಕೈಬಿಡಲಾಗಿದೆ. ಹಾಗೆಯೇ ನಾಲ್ಕು ಶಾಸನಗಳು, ಜನವದಂತಿಗಳು, ಐತಿಹ್ಯ

ಕಲ್ಲೂರು, ರ್‍ಯಾವಣಿಕೆ, ನರೇಗಲ್ಲು, ಕೋಡಿಕೊಪ್ಪ ಮುಂತಾದ ಕಡೆಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಇವೆಲ್ಲವನ್ನು ಒಟ್ಟಾಗಿ ಬಳಸಿಕೊಂಡು ಕಾವ್ಯವನ್ನು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಹಾಗೆಯೇ ಸಾಹಿತ್ಯಿಕವಾಗಿಯೂ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ವಂಶಾವಳಿಯ ಆಧಾರದ ಮೇಲೆ ಮೊಲ್ಲೆಬೊಮ್ಮಯ್ಯನು ದೇಶಗತಿ ಮನೆತನಕ್ಕೆ ಸೇರಿದವನಾಗಿದ್ದು, ತನ್ನ ಮಗನಾದ ಕಲ್ಲಿದೇವನಿಗೆ ವಜ್ರಪುರದ ಸಂಗಯ್ಯ ದೇಸಾಯಿಗಳ ಮಗಳಾದ ಶ್ರೀದೇವಿ ವರದಾನಿಯನ್ನು ಲಗ್ನ ಮಾಡಿದರೆಂದು ಸ್ಪಷ್ಟವಾಗುತ್ತದೆ. ಹೀಗಾಗಿಯೇ ಮೊಲ್ಲೆಬೊಮ್ಮಯ್ಯ ದೇಶಗತಿ ಮನೆತನಕ್ಕೆ ಸೇರಿದವನೆಂಬುದು ಸ್ಪಷ್ಟವಾಗುತ್ತದೆ.

ಇದೇ ಕಾಲಕ್ಕೆ ಶರಣರು ಧರ್ಮ ವಿರೋಧಿ ಎಂದು ಆರೋಪ ಹೊರಿಸಿದವರು ಜೈನ ಕವಿಗಳು ಹಾಗಾಗಿಯೇ ಇವರು ರಚಿಸಿದ ಕಾವ್ಯಗಳಲ್ಲೆಲ್ಲ ವೈರುಧ್ಯತೆಗಳನ್ನು ಕಾಣುತ್ತೇವೆ. ಉದಾ: 'ಧರಣಿ ಪಂಡಿತನ –ಬಿಜ್ಜಳರಾಯ ಚರಿತೆ' ಇಂಥ ವೈರುಧ್ಯಗಳ ನಡುವೆಯೇ ಕವಿ ಧೂಪದ ರಾಚೇಶನು ಶರಣನೊಬ್ಬನನ್ನು ಉನ್ನತೀಕರಿಸಿ ಕಾವ್ಯ ರಚಿಸಿದುದರ ಗುಟ್ಟೇನು? ಎಂಬುದರ ಸೂಕ್ಷ್ಮತೆಯನ್ನು ಕೂಡ ಕಂಡುಕೊಳ್ಳಲಾಗಿದೆ.

* * *

## ಶಾಸನ ಪಠ್ಯ ಮತ್ತು ಪೂರಕ ಆಕರಗಳು

**ಕಲ್ಲೂರಿನ ಶಾಸನಗಳು (೧೧೮೬)**

ಚಾಳುಕ್ಯ ಸೋಮೇಶ್ವರನ ೨ನೆಯ ವರ್ಷದ ವಿಶ್ವಾವಸುಸಂವತ್ಸರದ ಕಾರ್ತಿಕ ಪುಣ್ಣಮಿ, ಸೋಮವಾರ ಅಂದರೆ ಕ್ರಿ. ಶ. ೨೯-೧೦ -೧೧೮೬ರಲ್ಲಿ ಸೋಮೇಶ್ವರನ ಮಹಾಮಂಡಳೇಶ್ವರನಾದ ಚಾವುಂಡರಸನ ಮಗ ವೀರಬಿಜ್ಜಲದೇವರಸನು ಕಲ್ಲೂರ ಕಲಿದೇವಸ್ವಾಮಿಯ ಭಕ್ತನಾದ ಮೊಲ್ಲೆಬೊಮ್ಮಯ್ಯನಿಗೆ ಪ್ರಮಥವೃತ್ತಿಯಾಗಿ ಗಣಮಠಕ್ಕೆ ೨೦೦ ಮತ್ತರು ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.

೧. ಸ್ವಸ್ತಿಶ್ರೀಮಚ್ಚಾಳುಕ್ಯ ಚಕ್ರವರ್ತಿ ಸೋಮೇಶ್ವರದೇವ ವರ್ಷದ ೨ನೆಯ
ವಿಶ್ವಾವಸುಸಂವತ್ಸರದ ಕಾರ್ತ್ತಿಕದ ಪುಣ್ಣಮಿ ಸೋಮವಾರದಂದು ಶ್ರೀ

೨. ಮನ್ಮಹಾಮಂಡಳೇಶ್ವರಂ ಚಾಉಂಡರಸದೇವನ ಕುಮಾರಂ ವೀರ
ಬಿಜ್ಜಲದೇವರಸರು ಕಲ್ಲೂರು ಶ್ರೀಸ್ವಯಂಭು ಕಲಿದೇವಸ್ವಾಮಿಯ ಪಾ

೩. ದಾರಾಧಕಂ ಮೊಲ್ಲೆಯ ಬಮ್ಮಯ್ಯಂಗೆ ಪ್ರಮಥವ್ರಿತ್ತಿಯಾಗಿ ಗಣಮಠಕ್ಕೆ
ಕೊಟ್ಟ ಭೂಮಿ ಹಿರಿಯ ಹಳ್ಳದಿಂ ಮೂಡಲು ಕೊಪ್ಪ

೪. ಲಹಳ್ಳದಿಂದುತ್ತರ ಬಾಗದ ಸ್ಥಳದಲ್ಲಿ ಮತ್ತರಿನ್ನೂಱು ೨೦೦ ಯಾಚಂದ್ರಾರ್ಕ್ಕತಾರಂಬರಂ
ಭೂಮಿಪಾಳಕರು ಪ್ರತಿಪಾ

೫. ಳಿಸುವರು

**ಶಾಸನಗಳು (೧೮೯೮)**

ತ್ರುಟಿತ. ಇದರಲ್ಲಿ ಮೂರು ಅವಧಿಯ ಶಾಸನಗಳಿವೆ. ಚಾಳುಕ್ಯವಿಕ್ರಮ ಕಾಲದ ೨೩ನೆಯ ಬಹುಧಾನ್ಯ ಸಂವತ್ಸರದ ಚೈತ್ರ, ಬಹುಳ, ಅಮವಾಸ್ಯೆ, ಸೂರ್ಯಗ್ರಹಣದ ಉಲ್ಲೇಖವಿದ್ದು, ಇದು ಕ್ರಿ.ಶ. ೪-೪-೧೯೮ಲಕ್ಕೆ ಸರಿಹೊಂದುತ್ತದೆ. ಮೇಲೆ ಉಲ್ಲೇಖಿಸಿದ ಕಾಲದಲ್ಲಿ ಚಾವುಂಡರಸನು ನರೆಯಂಗಲ್ಲು ೧೨ನ್ನು, ಕಲ್ಲೂರು, ಬಳ್ಳಗೆಜೆಯ ಪ್ರಭುತ್ವವನ್ನು ಮಾಡುತ್ತಿದ್ದು ಕಲ್ಲೂರು ಸ್ವಯಂಭೂಕಲಿದೇವರ ಅಂಗಭೋಗ, ಪತೋಧನರಾಹಾರದಾನಕ್ಕೆ ಎಂದು ಬೆನತೂರ ಸೀಮೆಯ ದಕ್ಷಿಣಕ್ಕೆ ೫೦ ಮತ್ತರು, ಎರಂಬರವಿಯ

ದಕ್ಷಿಣಕ್ಕೆ ೫೦ ಮತ್ತರು ಹೀಗೆ ಬೇರೆಬೇರೆಡೆಯಲ್ಲಿ ಒಟ್ಟು ೧೨೦ ಮತ್ತರು ಭೂಮಿಯನ್ನು ದಾನ ನೀಡುತ್ತಾನೆ. ಇದರ ಜೊತೆಗೆ ಒಂದು ಗಾಣವನ್ನು ಕಾಳಾಮುಖ ಯತಿ ಶಿವಶಕ್ತಿಪಣ್ಡಿತರ ಕಾಲನ್ನು ತೊಳೆದು ನೀಡುತ್ತಾನೆ.

ಚಾಳುಕ್ಯವಿಕ್ರಮವರ್ಷದ ೫೦ನೆಯ ವಿಶ್ವಾಸನು ಸಂವತ್ಸರದ ಪುಷ್ಯ, ಶು. ೧೦, ಆದಿತ್ಯವಾರ ಉತ್ತರಾಯಣಸಂಕ್ರಮಣ ಕಾಲದಲ್ಲಿ ಅಂದರೆ ಕ್ರಿ. ಶ. ೨೫-೧೨-೧೧೨೫ ಪ್ರಧಾನದಂಡನಾಯಕ ಕನ್ನಡ ಸಂಧಿವಿಗ್ರಹಿ ಮನೆವೆಗ್ಗಡೆ ಮಹದೇವಯ್ಯನು ಎರಡಱುನೂಱನ್ನು ಆಳುತ್ತಿದ್ದಾಗ ಅವನ ಕೈಕೆಳಗಿನ ಅಧಿಕಾರಿಯಾಗಿದ್ದ ಬಾದಾಮಿಯ ಬಮ್ಮದೇವಯ್ಯನಾಯಕನು ಕಲ್ಲೂರ ಕಲ್ಲೇಶ್ವರದೇವರ ಚೈತ್ರಪವಿತ್ರಕ್ಕೆಂದು ಕುಕ್ಕನೂರ-೩೦ರಲ್ಲಿ ಯಾವ ಸ್ಥಳದಲ್ಲಿಯಾದರೂ ದೇವಾಲಯದ ಬಯಲಿಗೆ ಅಡಕೆ, ಮೆಣಸು, ಸೀರೆ ಮಳವೆ, ಅರಿಸಿನ ಮಳವೆ, ಅಲ್ಲದ ಮಳವೆ, ನೀಲಿಯ ಕೊಡ, ಎತ್ತು, ಕತ್ತೆ, ಕೋಣ ಮುಂತಾದವುಗಳ ಮೇಲೆ ಬಂದರೂ ಹತ್ತಕ್ಕೆ ಒಂದು ದಸವಂದವಾಗಿ ನೀಡಬೇಕೆಂದು ವಿಧಿಸುತ್ತಾನೆ. ಅಲ್ಲದೆ ಬಮ್ಮದೇವನ ಸುಂಕದ ಅಧಿಕಾರಿ ಜಕ್ಕರಾಜನು ದೇವರ ನಂದಾದೀಪಕ್ಕೆ ಮೂರು ಪಣವನ್ನು ಬಿಡುತ್ತಾನೆ.

ಚಾಳುಕ್ಯ ತ್ರೈಲೋಕ್ಯಮಲ್ಲದೇವನ ನಾಲ್ಕನೆಯ ವರ್ಷದ ಶ್ರೀಮುಖ, ಮಾಘ, ಅಮಾವಾಸ್ಯೆ, ಸೋಮವಾರದಂದು ಕ್ರಿ.ಶ.೧೪-೨-೧೧೫೪ರಲ್ಲಿ ಚಾವುಂಡಾರಸನ ಪತ್ನಿಯು ಸ್ವಾಮಿಯ ಪಾದಾರಾಧಕನಾಗಿದ್ದ. ಮೊಲ್ಲೆಯ ಬೊಮ್ಮಯ್ಯನಿಗೆ ಆರು ಮತ್ತರು ಭೂಮಿಯನ್ನು ಸರ್ವಮಾನ್ಯವಾಗಿ ನೀಡಿರುತ್ತಾಳೆ.

[ಮೇಲ್ಭಾಗ ಒಡೆದಿದೆ ]

೧. ................ಪರಸೈನ್ಯ ಭೈರವ ‖ ಸ್ವಸ್ತಿ ಸಮಧಿಗತ ಪ............

೨. ಮಂಣ್ಡಳೇಶ್ವರ ವೈರಿ ಭೂಪಾಳದರ್ಪ್ಪಕ ಮಹೇಶ್ವರಂ ಕುಸ್ವಕುಳ ಕುಮುದಿನಿಸರ [ಶ್ಚಂದ್ರ]

೩. ಮರೇಂದ್ರಂ ಶದ್ರಂಮಚ್ಚಾಉಣ್ಡರಸಂ ‖ ಬಿರುದಾರಾತಿ ನೃಪಾಳ ಮತ್ತಗಜ ಸಿಂಹಂ ದುಷ್ಟದರ್ಪ್ಪಿಷ್ಟ ನಿಷ್ಟು

೪. ರ ಸತ್ರೋರಗ ವೈನತೇಯನರಿಭೂಪಾದಿ ಸಕೋಳಾಹಳಂ ಪರವಾಚಾಳ ನೃಪಾಳ ಮೇಘಪವನಂ ವಿದ್ವಿ

೫. ಷ್ಟ ದೋರ್ಗ್ಗರ್ಬ್ಬ ಭೂಧರ ವಜ್ರಂ ಜಗದೇಕಗಂಡನೆನಿಕುಂ ಚಾಮಂಡ ಭೂಪಾಳಕಂ ‖ ಇನ್ತು ಕಿಸುಕಾಡೆಪ್ಪತ್ತುಮಂ ತ್ರಿಭೋಗಾ

೬. ಭ್ಯಂತರಮಾಳುತ್ತಂ ಮತ್ತಂ ಬೆಳುವಲದೊಳಗಣ ನರೆಯಂಗಲ್ಲು ಹಂನೆರಡುಮಂ ಕಲ್ಲೂರು ಬಳ್ಳಗೆಜೆಯ ಪ್ರಭುತ್ವಮಂ

೭. ಪ್ರತಿಪಾಳಿಸುತ್ತುಂ ಸುಖಸಂಕಥಾವಿನೋದದಿಂ ರಾಜ್ಯಗೆಯ್ಯುತ್ತಮಿದ್ರ್ದು ಶ್ರೀಮನ್ಮಮಹಾ ಮಂಡಳೇಶ್ವರಂ ಚಾಮಂಡರಸಂ ಕ

೮. ಲ್ಲೂರ ಶ್ರೀ ಸ್ವಯಂಭು ಕಲಿದೇವಸ್ವಾಮಿಯಂಗಭೋಗಕ್ಕಂ ತಪೋಧನರಾಹಾರದಾನಕ್ಕೆಂದು ಬಿಟ್ಟ ಬೆನತೂರಸೀ

೯. ಮೆ ತೆಂಕ ಕಗ್ಗುಡವಳ್ಳದಿಂ ಪಡುವ ಬಳ್ಳಂಗೆಜೆಯ ಸೀಮೆಯಿಂ ಬಡಗ ಮತ್ತರು ೫೦ ಬೆನತೂರ ಸೀಮೆಯಿಂ ಪಡುವಲು

೧೦. ಎರಬರವಿಯ ಸೀಮೆಯಿಂ ತೆಂಕಲು ಮಾನ್ಯದೊಳಗೆ ಮೂಡಣ ಭಾಗ ಮತ್ತರು ೫೦ ಭಳಾರಿಯಕೆಯಿಂ ತೆಂಕ ಮತ್ತರು

೧೧. ಹನ್ನೆರಡು ಎರಬರವಿಯ ದಾರಿಯಿಂ ಮೂಡಲು ಬಾವಿಯ ಹಳ್ಳದಿಂ ತೆಂಕ ಮತ್ತರು ಮೂಱು ತಾಜೆಯ ಹಳ್ಳದಿಂ

೧೨. ಮೂಡ ಕುಡುಗುಂಟೆಯ ದಾರಿಯಿಂ ಬಡಗಮತ್ತರು ಮೂರು ಹೆದ್ದೊಜೆಯಿಂ ಬಡಗ ಪೂದೋಂಟಂ ಮತ್ತರು ೧* ಎರಬರವಿಯ ದಾರಿ ಪಡುವಣ ಪೂದೋಂಟ ಮತ್ತರು ೧*

೧೩. ಅ (೦) ತ್ತು ೧೨೦ ಮಂ ಪರಿಸೂತ್ರದೊಳಗೊಂದು ಗಾಣಮುಮಂ ಚಾಳುಕ್ಯ ವಿಕ್ರಮಕಾಲದ ೨೩ನೆಯ ಬಹು

೧೪. ಧಾನ್ಯ ಸಂವತ್ಸರದ ಚೈತ್ರ ಬಹುಳ ಅಮವಾಸ್ಯೆ ಆದಿವಾರ ಸೂರ್ಯ್ಯ ಗ್ರಹಣದಂದು

೧೫. ಮನ್ಧದ ಶಿವಶಕ್ತಿಪಂಡಿತರ ಕಾಲಂಕಚ್ಚಿ ಧಾರಾಪೂರ್ವಕಂ ಮಾಡಿ ಸರ್ವ್ವನಮಶ್ಯವಾಗಿ ಬಿಟ್ಟ ನಿನ್ತೀಧರ್ಮ್ಮಮಂ ಸಾಸ

೧೬. ನವರ್ಯ್ಯಾದೆಯಂ ಕಲ್ಲೂರ ಎಂಟು ಗಾಉಂಡುಗಳು ನಡವ ಅರಸುಗಳು ಪ್ರತಿಪಾಳಿಸುವರೀ ಧರ್ಮ್ಮಮಂ ಕಿಡಿಸಿ

೧೭. ದರಪ್ಪಡೆ ವಾರಾಣಾಸಿ ಗುರುಕ್ಷೇತ್ರದೊಳು ಸಾಯಿರ ಕವಿಲೆಯುಮಂ ಸಾಯಿರ ಬ್ರಾಹ್ಮಣರುಮಂ ಕೊಂದ

೧೮. ಪಾತಕರಪ್ಪರು || ಸ್ವದತ್ತಂ ಪರದತ್ತಂ ವಾ ವಾ ಹರೇತಿ ವಸುನ್ದರಾ ಶಷ್ಟಿರ್ವ್ವರಿಶ ಸಹಪ್ರಾಣಿ ವಿಷ್ಟಾಯಾಂ

೧೯. ಜಾಯತೇ ಕೃಮಿ || ಸ್ವಸ್ತಿ ಶ್ರೀಮನ್ಮಹಾಪ್ರಧಾನದಂಡನಾಯಕ ಕನ್ನಡಸನ್ಧಿವಿಗ್ರಹಿ ದಂಡಾ

೨೦. ಯದದಿಷ್ಟಾಯಕಂ ಮನೆವೆರ್ಗ್ಗಡೆ ಮಹಾದೇವಯ್ಯಂಗಳ್ ಎರಡಱು ನೂಱಿಂ ಸುಖಸಂಖಥಾ ವಿ

೨೧. ನೋದದಿಂದಾಳುತ್ತಮಿರೆ ||ತತುಪಾದ ಪದ್ಮೋಪಜೀವಿ|| ಅಗ್ರಹಾರಂ ಬಾದಾಮಿಯ ಬಮ್ಮದೇವನಾಯ

೨೨. ಕನ ಪುತ್ರಂ ಗೋತ್ರಪವಿತ್ರಂ ವಿಪ್ರಕುಳಕಮಳಮಾರ್ತ್ತಾಂಡಂ ಪ್ರಜೆಮೆಚ್ಚೆಗಂಡಂ ಹೆಗ್ಗಡೆ ಮಹದೇವಯ್ಯನಾಯ

೨೩. ಕನರಡಱುನೂಱಱ ಹೆರ್ಜ್ಜುಂಕಮನಾಳುತ್ತಂ ದೇವರ ಚೈತ್ರ ಪವಿತ್ರ ಕೆಂದು ಕುಕ್ಕನೂ

೨೪. ರ ಮೂವತ್ತಱೊಳಗೆಲ್ಲಿಯಾದೊಡಂ ಗುಡಿಯ ಬೀಡಿಗಂ ಅಡಕೆ ಮೆಣಸು ಧಸರಿಯ ಮಳವೆ ಸೀರೆಯ

೨೫. ಮಳವೆ ಹಡವಿನ ಮಳವೆ ಅರಿಸಿನದ ಮಳವೆ ಅಲ್ಲದ ಮಳವೆ ನೀಲಿಯ ಕೊಡ ಎತ್ತಿನಲು ಕ

೨೬. ತ್ತೆಯಲು ಕೋಣನಲು ಏನ ಹೇಜೆ ಬಂದಡಂ ಹೆರ್ಜ್ಜುಂಕ ಬೀರವಣ ವಡ್ಡಲಾವುಳ ಸಹಿತ ಹತ್ತಕೊಂದು ದ

೨೭. ಸವಂದವಾಗಿ ಚಾಳುಕ್ಯ ವಿಕ್ರಮಕಾಲದ ೫೦ನೆಯ ವಿಸ್ವಾವಸು ಸಂವತ್ಸರದ

೨೮. ಪುಶ್ಯ ಸುದ್ಧ ೧೦ ಆದಿವಾರದುತ್ತರಾಯಣ ಸಂಕ್ರಮಣದಂದು ರುದ್ರ ಸಕ್ತಿಪಂಡಿ

೨೯. ತರ ಕಾಲಂ ಕಚ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ || ಮತ್ತವಾಯಯ್ಯನ ಹೆಗ್ಗಡೆ ಸುಂಕದ ಜಕ್ಕರಾಯನು

೩೦. ಕಲ್ಲೂರಲು ಮುನ್ನ ಸುಂಕಕೆ ನಡೆವ್ವಮೂಱು ಫಣಮುಮಂ ದೇವರ ನಂದಾದೀವಿಗೆ ಎರ್ಣ್ಣೆಗೆ ಬಿ

೩೧. ಟ್ಟ ಇನ್ತೀ ಧರ್ಮ್ಮಮಂ ಸುಂಕಕೆ ನಡೆವ ಹೆಗ್ಗಡೆಗಳುಂ ಭರತನೆರವಿಯುಂ ಸಾಸನ ಮರ್ಯ್ಯಾದೆಯಂ ಕಿಡಿಸ

೩೨. ದೆ ನಡಸುವವರು ಈ ಧರ್ಮ್ಮಮಂ ಕಿಡಿಸಿದರಪ್ಪಡೆ ಗಂಗೆಯಲುಂ ವಾರಣಾಸಿಯಲುಂ ಏಳುಕೋಟಿ ಕವಿಲೆಯು

೩೩. ಮಂ ಏಳುಕೋಟಿ ತಪೋಧನರುಮಂ ಏಳುಕೋಟಿ ಬ್ರಾಹ್ಮಣರುಮಂ ಕೊನ್ದ ಪಾತಕರಪ್ಪರು|| @@@@@@

೩೪. ದಾನಂ ವಾಪಾಲನಂವಾಪಿ ದಾನಾತ್ರ್ಯೇಯೋನುಪಾಲನಂ ದಾನಾತ್ಸ್ವ ರ್ಗ್ಗಂ ಮಾವಾಪ್ನೋತಿ ಪಾಲನಾದಚ್ಯುತಂ ಪದಂ ||@@

೩೫. ಶ್ರೀ ಸ್ವಸ್ತಿಶ್ರೀಮತು ಚಾಳುಕ್ಯ ಚಕ್ರವರ್ತ್ತಿ ತ್ರೈಲೋಕ್ಯಮಲ್ಲದೇವ ವರ್ಷದ ೪ನೆಯ ಶ್ರೀಮುಖ ಸಂವತ್ಸರದ ಮಾಘಮಾಸದಮವಾಸ್ಯೆ

೩೬. ಸೋಮವಾರದಂದು ಶ್ರೀಮನುಮಹಾಮಂಡಳೇಶ್ವರಂ ಚಾವುಂಡರಸ ದೇವನರ್ದ್ಧಾಂಗಿ ಮಹಾದೇವಿಯರು ಕಲ್ಲೂರುನಾಲುತ್ತ ಶ್ರೀಸ್ವಯಭು ಕ

೩೭. ಲಿದೇವಸ್ಥಾಮಿಯ ಪಾದಾರಾಧಕಂ ಮೊಲ್ಲೆಯ ಬಂಮ್ಮೆಯಂಗೆ ದೇಹಾತ ವ್ರಿತ್ತಿಯಾಗಿ ಕೊಟ್ಟ ಸರ್ವ್ವಮಾನ್ಯ ಬಳಾರಿಯ ಕೆಯ ಸೀಮೆಯಿಂ ಪತ್ತಿದ

೩೮ ಬಡಗಲು ಮತ್ತರಾಱು || ಕಲೀದೇವಸ್ವಾಮಿಯ [ಬಿಟ್ಟ] ಲೆಕ್ಕದಲೊಂದು ಮನೆಮಾಚಂದ್ರಾರ್ಕ್ಕಸ್ಥಾಯಿಯಾಗಿ ಭೂಮಿಪಾಳಕರು ಪ್ರತಿಪಾಳಿಸುವರು.

(ಈ ಶಾಸವನ್ನು ಈಗ ದೇವಾಲಯದ ಹೊರಗೆ ಎಡಭಾಗದ ಗೋಡೆಗೆ ಒರಗಿಸಿದೆ)

**ಕೋಡಿಕೊಪ್ಪದ ಶಾಸನಗಳು**

ಈ ಶಾಸನ ಮೂಲಬ್ರಹ್ಮೇಸ್ತರ ದೇವಸ್ಥಾನದಲ್ಲಿ. ಪ್ರತಾಪ ಜಗದೇಕ ಮಲ್ಲ ವರ್ಷದ ನೆಯ ರಕ್ತಾಕ್ಷಿಸಂವತ್ಸರದ ಪುಷ್ಯದಮವಾಸ್ಯೆ ಸೋಮವಾರ ಉತ್ತರಾಯಣ ಸಂಕ್ರಮಣ ವ್ಯತೀಪಾತ ಸೂರ್ಯಗ್ರಹಣ ಎಂದಿದ್ದು ಕ್ರಿ.ಶ. ೧೧೪೪ ಡಿಸೆಂಬರ್ ೨೫ಕ್ಕೆ ಸರಿ ಹೊಂದುತ್ತದೆ.

ಇದು ಯಲಬುರ್ಗಿಯ ಸಿಂದ ಅರಸು ಅಚುಗಿಯ ಮಗನಾದ ಮಹಾಂಮಂಡಲೇಶ್ವರ ಜಗದೇಕ ಮಲ್ಲನನ್ನು ವರ್ಣಿಸುತ್ತಿದೆ. ಇವನು ಕಿಸುಕಾಡು, ಬಾಗಡಗೆ,, ಕೆಲವಡಿ ಮತ್ತು ನೆರೆಲ್ಲು ಪ್ರದೇಶಗಳನ್ನಾಳುತ್ತಿದ್ದನು. ಅವನು ಕಿಜುನರೆಯಂಗಲ್ಲಿನ ಹಲವಾರು ಉತ್ಪನ್ನಗಳನ್ನು ಮೂಲ ಬ್ರಹ್ಮೇಶ್ವರದೇವರಿಗೆ ದಾನವಾಗಿ ಇತ್ತನು. ಹಾಗೆಯೇ ಮೊಲ್ಲೆಬೊಮ್ಮಯ್ಯನೂ ದೇವರಿಗೆ ದಾನವಿತ್ತದನ್ನು ಈ ಶಾಸನ ಹೇಳುತ್ತಿದೆ.

೧. @ನಮಸ್ತುಂಗಶಿರಶ್ಚುಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾ ರಂಭ ಮೂಲಸ್ತಂಭಾಯ ಶಂಭವೇ.@

೨. @ನಮಶ್ಶ್ಯಾಶ್ವತಿ ಶಾನಂದಜ್ಞಾನೈಶ್ವರ್ಯಮಯಾತ್ಮನೇ ಸಂಕಲ್ಪ ಸಫಲಬ್ರಹ್ಮಸ್ತಂಭಾರಂಭಾಯ ಶಂಭವೇ@

೩. ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರ

೪. ಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಬರಣಂ ಶ್ರೀಮತು ಪ್ರತಾಪಚಕ್ರವ.

೫. ರ್ತಿ ಜಗದೇಕಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧ ಮಾನಮಾಚಂದ್ರಾ.....

೬. ರ್ಕ್ಕ ತಾರಂಬರಂ ಸಲುತ್ತಮಿರೆ @ ಆ ಮಹಾನುಭಾವನ ಪಾದ ಪದ್ಮೋಪಜೀವಿ ಆಚುಗಿಮಂಡಳೇಶನ ತ–

೭. ನೂಭವನುಗ್ರವಿರೋಧಿ ಮಂಡಳೇಶಾ ಚಳವಜ್ರನಪ್ರತಿ ಮಪೌರುಷನುನ್ನತಕೀರ್ತಿಯಿಂ–

೮. ದ ನಾಗ್ಗೋಚರನಾರ್ಗ್ಗವೆಂಬಿನೆಗ [ವೀ] ಜಗಮೆಲ್ಲಮನೆಯ್ದೆ [ಸುತ್ತು] ಗೊಂಡಾವರಿಸಿರ್ದ್ದ ಜಸದುಂನ್ನತಿಯಿಂ

೯. ಕಲಿಪೆರ್ಮ್ಮ ಭೂಭುಜ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ। ವಿರೋಧಿ ಮಂ

೧೦. ಡಳಿಕ ಮದನಮಹೇಶ್ವರ । ನಿಜನಾಮಾವಾಳೀವಿರಾಜಿತರಪ್ಪ ಶ್ರೀಮನುಮಹಾಮಂ

೧೧. ಡಳೇಶ್ವರಂ ಜಗದೇಕಮಲ್ಲಪೆರ್ಮಾಡಿದೇವರ [ಸ]ಕ್ಕಿಸುಕಾಡುನಾಡುಮಂ ಬಾಗಡಗೆನಾಡುಮಂ[ಕೆ]

೧೨. ಳವಾಡಿನಾಡುಮಂ ನರೆಯಂಗಲ್ಲು ............ ಮುಂ ದುಷ್ಟ ನಿಗ್ರಹವಿಶಿಷ್ಟಪ್ರತಿ (ಪಾ)

೧೩. [ಳ] ನಮ್ಮಾಡಿ ರಾಜಧಾನಿ ............ ನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆ [ಯ್ಯು]

– UU – U – UUU –
೧೪. ತ್ತಮಿರೆ ॥ ವೃ ॥ ಮೊರೆದಾ ................................... ನಭವಂ ಬ್ರಹ್ಮೇ[ಶ್ವ]ರಂ ನಿಚ್ಚವಾದೆರದಿಂ

೧೫. ದರ್ಚ್ಚಿಸುತ್ತಿರ್ಪ ತನ್ನ ಕುಲದೆಯ್ಯಂ ವಾಮಶಕ್ತಿಬ್ರ [ತೀಶ್ವರರಾ] ರಾಧ್ಯನೆನಲ್ಕೆ ಪೆಂಪನ [ದ]

೧೬. ನಿನ್ನೇವಣ್ಣಿಂಪಂ [ಬಣ್ಣಿಪಂ] ನರನೀ ಮೊಲ್ಲೆಯೆ ......... ಯಾಚಂಣನಂ ಧರ್ಮಾತ್ಮನಂ ಬಮ್ಮನಂ ॥ ಶ್ರೀ–

– UUUUU –
೧೭. ವಾಮಶಕ್ತಿಪಂಡಿತದೇವ [ರ್ಮ್ಮಧ್ಯಾಹ್ನಕಾಮ] ಧೇನುವೆನಿಪ್ಪೀ ಭೂವಳಯ ವಿದಿತಕೀ

೧೮. ರ್ತ್ತಿಯನಾವರಿಸಿದರೆಂದೊಡವರನೇ ವಣ್ಣಿಪುದು ॥ ಗುರುಗಮಿ ತಪೋಧನರ್ಪ್ಪುರಹರ–

೧೯. ನಿಷ್ಠದೆಯ್ಯರ್ವ್ವುಗುರಮೂನೂರ್ವರ್ಗ್ಗಚ್ಚರಿಯೆನಿಪ ದಾನಗು[ಣ] ವಾಭರಣಂ ಕೇ–

೨೦. ವಳಮೆ ಸುಜನಚೂಡಾಮಣಿಗ [ಣ] ॥ [ಪ]ರವನಿತಾಲೋಲುಪರಂ ಪರಧನಕಾಂಕ್ಷಿ

೨೧. ತರನುಚಿತವಜೆಯದ ......... ವಿದ್ಯಾಧರರೆನಿಸಿರ್ದ್ದೆಲೆಯ ಬೂ–

೨೨. ಜಗ[ರೆವ]ಮ್ಬುದು ॥ [ಸ್ವಸ್ತಿಶ್ರೀ] ಮತು ಪ್ರತಾಪ ಚಕ್ರವರ್ತ್ತಿ ಜಗದೇಕ

೨೩. ಮಲ್ಲವರ್ಷದ ನೆಯ ರಕ್ತಾಕ್ಷಿ [ಸಂವ]ತ್ಸರದ ಪುಷ್ಯದಮವಾಸ್ಯೆ ಸೋಮವಾರ ಉ[ತರಾ]

೨೪. ಯಣ ಸಂಕ್ರಮಣ ವ್ಯತೀಪಾತ ಸೂರ್ಯಗ್ಯಹಣದನ್ದು ಕಿಸುಕಾಡೆಪ್ಪತ್ತ–

೨೫. ಱ ಬಳಿಯ ಬಾಡಂ ಕಿಱುನರೆಯಂಗಲ್ಲ ಶ್ರೀ ಮೂಲಸ್ಥಾನ ಬ್ರಹ್ಮೇಶ್ವರ ದೇವರಂಗಭೋ[ಗ]

೨೬. ಕ್ಕೆ ತಂಬುಲಿಗಸಾಸಿರ್ವ್ವರ ಶೇಷಮಿರ್ದ್ದು ಕಿಱುನರೆಯಂಗಲ್ಲ ಕೊಯ್ದೆಲೆಯ ಹೇಱಿಂಗೆ ವೀಸವೊಂದು[ತ್ತ] ರದೇವರ್ಗ್ಗೆ–

೨೭. ಲೆವ್ವೊಱಿಗೆ ಕಾ[ಗಿ] ಣಿಯೆರಡು ॥ ಮತ್ತವಾದೇವರ ನನ್ದಾದೀವಿಗೆಗೆ ಸರ್ವ್ವನಮಶ್ಯವಾಗಿ ಬಿಟ್ಟ

೨೮. ಗಾಣವೊನ್ದು ॥ ಬ್ರಹ್ಮೇಶ್ವರದೇವರ್ಗುಗುರಮೂನೂರ್ವ್ವರುಂಮೆಲೆಯಬೋಜಂ [ಗ] ರ

೨೯. ಯ್ಯೂಱನಾಲ್ವರು ಯಶೇಶಮಿರ್ದ್ದು ಪ್ರತ್ಯೇಕ ವೊಕ್ಕಲಲೊನ್ದು ಪಣಮಂ ದೇವರಂಗಭೋ

೩೦. ಗಕ್ಕೆ ಬಿಟ್ಟರು ॥ ಉಮ್ಮಚಿಗೆಯ ವೂರೊಡೆಯ ಪ್ರಮುಖ ಮಹಾಜನ ನೂಱನಾಲ್ವ–

೩೧. ರ ಕಯ್ಯೊಳು ಮೊಲ್ಲೆಯ ಬಮ್ಮಣ್ಣಂ ಸರ್ವನಮಶ್ಯಮಾಗೆ ಮಾಱುಗೊಂಡು ಊರಿಂ ಮೂಡ

೩೨. ಕುಕ್ಕನೂರ ಬಟ್ಟೆಯ ಗೊತ್ತಿನ ಕಲ್ಲಿಂ ಬಡಗ ತನ್ನ ಬ್ರಹ್ಮೇಶ್ವರ ದೇವರ್ಗ್ಗೆ ಬಿಟ್ಟ ಮತ್ತರು ಹ–

೩೩. ನ್ನೆರಡು॥ ಇನ್ತೀ .............. ಸ್ಥಾನಮಂ ಪ್ರತಿಪಾಳಿಸಿದರ್ಗ್ಗೆವಾರಣಾಸಿ ಕುರುಕ್ಷೇತ್ರ ವ

೩೪. ರ್ಘ್ಯತೀರ್ತ್ಥಮೆಂಬ ದಿವ್ಯತೀರ್ತ್ಥಂಗಳೊಳು ಸೂರ್ಯಗ್ರಹಣನ್ದು ದಿವ್ಯತಪೋಧ

೩೫. ನರ್ಗ್ಗಂ ವೇದಾಪಾರಗರಪ್ಪ ಬ್ರಾಹ್ಮಣರ್ಗ್ಗಂ ಸಹಸ್ರಕವಿಲೆಗಳನಳಂ ಕಾರಸಹಿತಂ ಕೊಟ್ಟ

೩೬. ಪುಣ್ಯಫಳಮಕ್ಕು ಇದನಳಿದಾತನಾ ತೀರ್ತ್ಥಂಗಳೊಳಾ ತಪೋಧನರುಮನಾ ಬ್ರಾಹ್ಮಣರು-

೩೭. ಮನಾ ಕವಿಲೆಗಳ್ಮನಳಿದ ಮಹಾಪಾತಕನಕ್ಕು ॥ @॥

ಮೊಲ್ಲೆಬೊಮ್ಮಯ್ಯನನ್ನು ಪ್ರಸ್ತಾಪಿಸುವ ನರೇಗಲ್ಲಿನ ತ್ರಿಪುರಾಂತಕ ದೇವಾಲಯದ ಒಳಗೋಡೆಯ ಮೇಲಿರುವ ಶಾಸನ.

ಬೊಳ್ವೆಳ ೩೦೦ರಲ್ಲಿ ಕಿಸುಕಾಡು ೭೦ ನರೆಯಂಗಲ್ಲ ೧೨ ಮೊದಲಾದ ಭಾಗಗಳನ್ನು ಮಹಾಮಂಡಳೇಶ್ವರ ಕುಶವವಂಶದ ಆಚರಸನು ಆಳುತ್ತಿದ್ದಾಗ ಅವನ ಹಿರಿಯಮಗ ಹೆಮ್ಮಾಡಿದೇವನು ಹಿರಿಯ ನರೆಯಂಗಲ್ಲಿನ ಶೋಭನೇಶ್ವರ ದೇವರಿಗೆ ಸಂಬಂಧಿಸಿದ ಕಿರುನರೆಯಂಗಲ್ಲಿನ ಮಲ್ಲೇಶ್ವರದೇವರಿಗೆ ದಾನವಿತ್ತುದನ್ನು ಪ್ರಸ್ತಾಪಿಸುತ್ತಿದೆ. ಜೊತೆಗೆ ಮೊಲ್ಲೆಯ ಬರ್ಮಣ್ಣನು ಬಿಟ್ಟ ದಾನವನ್ನೂ ಹೇಳುತ್ತಿದೆ.

[೧] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । [೨] ತ್ರೈಲೋಕ್ಯನಗ ರಾರಂಭಮೂಲಸ್ತಂಭಾಯ ಶಾಂ (ಶಂ)ಭವೇ ॥ [೩] ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾ [೪] ರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತಿ (ತ್ರಿ)ಭವನಮಲ್ಲದೇವರ ವಿಜಯರಾಜ್ಯಮುತ್ತರೋತ್ತ [೫] ರಾಭಿವ್ರಿ (ವೃ)ದ್ಧಿಪ್ರವರ್ದ್ಧಮಾನಮಾ- ಚಂದ್ರಾರ್ಕ್ಕತಾರಂ ಬರಂ ಜಯನ್ತೀಪುರವರದ ನೆಲೆವೀಡಿನೊಳ್ ಸುಖಸಂಕ-ಥಾವಿನೋದದಿಂ [೬] ರಾಜ್ಯಂಗೆಯ್ಯುತ್ತಮಿರೆಯಿರೆ [೧] ತತತ್ಪಾದಪದ್ಮೋಪಜೀವಿಗಳ್ [೧] ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಣ [೭] ಳೇಶ್ವರಂ ಭೋಗಭೋಗೀಶ್ವರ । ಕುಸುವಕುಳಕುಳಯದಿವಾಕರ ಸತ್ಯರತ್ನಾಕರ । ಅಭಿನವಧರ್ಮ್ಮನನ್ದ [೮] ನ ವಿಭವಸಂಕ್ರನ್ದನ [೧] ಬಡ್ಡುಗಂಡರೆ ವರಿಸುವ ಮಣ್ಡಳಿಕರ ಗಡ್ಡ ಗಂಡಭೇರುಣ್ಣ। ಅಹಿತಮಣ್ಡಳಿಕಸೂಜಿ [೯] ಕಾಱ ಅಣ್ಣ(?ನ್ನೋ) ನಂಕಕಾಱ । ಸಂಗ್ರಾಮಜತ್ತಲಟ್ಟ ಸುಭಟನ್ರಿ (ನೃ)ಪಲಲಾಟಪಟ್ಟ। ಸಹಜಮ್ರಿ (ಮೃ)ಗಮದಾಮೋದ ವಿ[೧೦] ತರಣವಿನೋದ । ಸಾಕ್ಷರಿಕಸಮುದ್ಧರಣ ಕಲಿಗಳಾಭರಣ । ಶ್ರೀಮತ್ರಿ(ತ್ರಿ)ಭುವನಮಲ್ಲದೇವರ ಕೇಸರಿ ರಿಮಣ್ಡಳಿ [೧೧] ಕತಳಲಪ್ರಹಾರಿ । ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಣ್ಡಳೇಶ್ವರಂ ಆಚರಸರ್ ಕಿಸುಕಾಡೆಪ್ಪುತ್ತು [೧೨] ಮಂ ಬೆಳ್ವೊಲಮೂನೂಱಱೊಳಗಣ ಹನ್ನೆರಡರ ವೊದಲ ಬಾಡಂ ನರೆಯುಂಗಲ್ಲಬ್ಬೆಗೆಱೆ ವೊದಲಾಗಿ ಪಲವುಂ ಬಾಡಂ [೧೩] ಗಳಂ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆಯಿರೆ [॥] ತಲೆದೋಱಲ್ ಮಿಱೂನಲ್ ಪೊಡಱಲೆಡಱ [೧೪]ಲಾದರ್ಪ್ಪಿಸಲ್ ಕುರ್ಕ್ಕೆ ದಕ್ಕುಂದಲೆ ವಾಯಲ್ ಕಲ್ಕಿ ವೀರಾರಿಗಳುಱದದಟರ್ಮ್ಮನ್ನೆ ಯಸ್ಯರ್ಂನ್ನೆಯಬ್ಬಾಲ್ ದಲೆಯಂ ಸರ್ವ್ವಶ್ವ (ಸ್ವ) [೧೫] ಮಂ ಕೊಟ್ಟಡಿಗೆಱಗಿ ಶರಣ್ಬೊಕ್ಕು ಮೂವಿಟ್ಟುಯೊಕ್ಕಲ್ ಗೆಲಸಕ್ಕಾಂತಿರ್ದ್ದರಾರಾದಮನ್ರಪನಿದಿರೊಳ್ಕಿರೊ ಮಾಱಾಂಪ ಗಂಡರ್ ॥ [೧೬] ಇನ್ತು ಪೊಗರ್ತ್ತೆಗಂ ನೆಗರ್ತ್ತೆಗಂ ನೆಲೆಯಾಗಿ ದುಷ್ಟನಿಗ್ರಹಶಿಷ್ಟಪ್ರತಿಪಾಳನದಿಂ ರಾಜ್ಯಂಗೆಯ್ಯುತ್ತಮಿರ್ದ್ದು [।] ಶ್ರೀಮತ್ (ಚ್) [೧೭] ಚಾಳುಕ್ಯವಿಕ್ರಮಕಾಲದ ೪೫ನೇಯ ಶುಭಕ್ರಿ (ಕೃ)ತ್ಸಂವಚ್ಛರದ ಚೈತ್ರ ಸುದ್ಧ ೮ ಸೋಮವಾರ ಉತ್ತರಾಯಣಸಂಕ್ರಾ [೧೮] ನ್ತಿಯಂದು ಮಹಾಮಣ್ಡಳೇಶ್ವರಂ ಆಚರಸರ್

ಕಿಸುಕಾಡೆಪ್ಪತ್ತಜೊಳಗಣ ಕಿಱುನರೆಯಂಗಲ್ಲ ಶ್ರೀ ಮೊಲ್ಲೇಶ್ವರದೇವ [೧೯] ಗ್ಗೆ ಹಿರಿಯನರೆಯಂಗಲ್ಲ ಕೊ(?ಕೋ;ಸೋ?)ಭ (ಬ?)ಗೇಶ್ವರದೇವರ ಸಮ್ಮಂಧಿಯ ಮೊಲ್ಲೇಶ್ವರದೇವರ್ಗ್ಗೆ ಸರ್ಬ್ಬ (ರ್ವ್ವ)ಬಾಧೆ (ದ) ಪರಿಹಾರವಾಗಿ ಧಾರಾ[೨೦] ಪೂರ್ಬ್ಬ (ರ್ವ್ವ)ಕಂ ೧೨ ಮತ್ತರಂ ಬಿಟ್ಟರ್ ॥ ಅಂತಾ ಹನ್ನಿಮತ್ತರ್ಕ್ಕೆಯತಿಂ ಮೇರೆಯಾವು(ವ)ವೆಂದಡೆ [।] ಊರಿಂ ತೆಂಕಲ್ ಹಿರಿಯನ [೨೧] ರೆಯಂಗಲ್ಲ ಹೊಸಲದ ಮೇರೆಯಿಂ ಪಡುವಲ್ ತೆಂಕಲುಮ್ಮಚಿಗೆಯ ಹೊಲದ ಮೇರೆಯಿಂ ಬಡಗಲ್ [॥] [೨೨] ಪೇರ್ಮಗನಾಚನ್ರಿ(ನೃ)ವಾಂಕನ ಧರ್ಮ್ಮವ ನಡಸುತ್ತವಿರ್ಪ್ಪ ಹೆಮ್ಮಡಿದೇವಂ ಕೂರ್ಮ್ಮೆಯೊಳು ನೋಡಿ ರಕ್ಷಿಸಿ ಧರ್ಮ್ಮದೆ [೨೪] ಪ್ರತಿಪಾಳಿಸುತ್ತ ಮಿರ್ಕ್ಕಂ ಜಗದೊಳ್ [।] ಮತ್ತು ವದ ಱ ತದನನ್ತರದೊಳ್ [।] ಅಂಗನೆನಂ ಗಜ ನರ್ತ್ತಿಜನಗಳ್ಗೆಂಗಾಧಿನಾ ॥ [೨A] ವಾ ಜನೂರ್ಜ್ಜಿತತೇಜಂ ತುಂಗಯಶನೆದರ್ಗ್ಗ ಸಿಂಘಂ (ಗಂ) ಜಗದೊಳಗೆ ನೆಗರ್ದ ಮೊಲ್ಲೆಯ ಬಮ್ಮ (ಮ್ಮಂ) [॥] ಮತ್ತವಾತನ ಮ [೨೫] ಹಿಮೆಯಂ (ಯೆಂ) ರೆಂದಡೆ ಎಡೆಯಾಡಿ ವಂದಿಬ್ರಿಂ (ವೃಂ)ದಂ ಬಡವಾದಪ್ರುದೆಂದು ಮನದಲಾಳೋಚಿಸಿ ಬಾ ಪಿಡಿಯೆಂದು ಕುಡುವ ಬಮ್ಮ [೨೬]ನ ಪಡೆದರ್ತ್ಥಂ ಸೂಳೆಯನ್ತೆ ಕೈಗೆಯ್ದಿಕ್ಕು (ಕ್ಕು) [॥] ಅಂತಾಕಾರಹಕ್ಕದಧಿಷ್ಪಾ(ಷ್ಠಾ)ಯಕಂ ಮೊಲ್ಲೆಯ ಬರ್ಮ್ಮಣ್ಣಂ ಮಾಡಿದ ಧರ್ಮ್ಮವೆಂತೆಂದಡೆ [।] [೨೭] ವಿದಿತಂ ಖ್ಯಾತಿಗೆ ನೆಲೆಯಾಗುದಿ ತೋದಿತಮೆನಿಸಿ ನೆಗರ್ದ್ದ (ರ್ದ) ಮೊಲ್ಲೇಶ್ವರದೊಳ್ ಸದಮಲಭಕ್ತಂ ಬರ್ಮ್ಮಣನಿದು ಶಾಸ್ವತಮೆಂ [೨೮] ದು ಬಿಟ್ಟ ದೇವರ್ಗ್ಗಗಳ್ [॥] ಮನ್ನಿಸಿ ದಯೆಯಿಂದರಸಂ ತಂನಂ ನಡೆಸುತ್ತಮಿರ್ದ್ದ ಬೇಡಿತನೀಯಲ್ ಹನ್ನಿರ್ಮ್ಮತ್ತರ್ ಕೆಯ್ಯಂ ಪನ್ನ [೨೯] ಗಭೂಷಣಗೆ ಬಿಟ್ಟನಾಗಳ್ ಬಮ್ಮ (ಮ್ಮಂ) [॥]................

## ಮೊಲ್ಲೆಬೊಮ್ಮಯ್ಯಗಳ ವಂಶಾವಳಿ

ಶ್ರೀ ಮತ್ಪರಮ ಪಾವನ ಚರಿತ್ರಚಾರುತರ ಸನ್ಮೋಹನಾಂಗ ಮದನ ಮರ್ದನ ಮಾಯಾಕೋಲಾಹಲ ನಿತ್ಯ ನಿರಂಜನ ನಿರಾಕಾರನಿಗಮಗೋಚರ ಸಚ್ಚಿದಾನಂದ ನಿತ್ಯ ಪರಿಪೂರ್ಣಹೃದಯ ಜಗದ್ವಿಸ್ತಾರ ಮೂಲಸ್ತಂಭಾಯಮಾನ ಪರಿಶಿವ ಶ್ರೀಮದ [೧](ಲಮಾಪ್ರಭು)[೧] ಸ್ವಾಮಿ ಶ್ರೀ ಶಿವಲ್ಪುರ [೨](ಪು)[೨] ರವಗೆ ಸರ್ವ ಅಧಿಕಾರಿ ಕಲ್ಲಿದೇವ ಗುರುವರ್ಯ ಕರಕಂಜಾತರ ವಂಶಾವಳಿಯು.

ಶ್ರೀ ಗುರು ಕಲ್ಲಿನಾಥ [೩](ಪ್ರಿಯ)[೩] ಸ್ವಾಮಿಯು [೪](ರ್‍ಯಾವಣಕಿ)[೪]ಯಲ್ಲಿ ಉದ್ಭವಿಸಿದ ಶಿಶುವನ್ನು ತಂದು ಅನಂತ ಪವಾಡವನ್ನು ಆ ಶಿಸುವಿನ ತಂದೆ ತಾಯಿಗೂ ಮತ್ತು ಅನಂತ ಭಕ್ತರಿಗೂ ತೋರಿಸಿ ನರೆಗಲ್ಲಲ್ಲಿಯರಡೂ [೫](ನ್ಯಾಯ)[೫] ಕಟ್ಟಿ ಹಾಕಿಸಿ ಅದರ ಮೇಲೆ ಕೂತು ತನ್ನ ವಶ ಮಾಡಿ ಆ ನರೇಗಲ್ಲ ನ್ಯಾಯದ ಕಲ್ಲಿನಾಥನೆಂದು ಪ್ರತಾಪವಹಿಸಿ ಆ ಶಿಸುವಿಗೆ ಮೊಲ್ಲೆ–ಬೊಮ್ಮವಡಿಯನೆಂದು ಹೆಸರನ್ನಿಟ್ಟು ತನ್ನ ಸೇವೆಯಲ್ಲಿಟ್ಟುಕೊಳ್ಳಲು ಈ ಪ್ರಯದಮಸ್ಥಲ? ವಿರಕ್ತ ಗುರುವರ್ಯ ನೀವಾದ ಕೃಪೆಯಿಂದ ಆ ಮೊಲ್ಲೆಬೊಮ್ಮವಡಿಯನು ರುದ್ರವೀಣೆಯನ್ನು ಪಿಡಿದು ಗಾನ ಮಾಡಲು ಆ ಗಾನಲೋಲನಾದ ಶಿವ ಜಂಗಮ ಕಲ್ಲಿನಾಥನು ಪ್ರತ್ಯಕ್ಷನಾಗಿ ಆತನ ಗಾನಕ್ಕೆ ಮೆಚ್ಚಿ ಭಳಿರೈ ನನ್ನ ಪುತ್ರನೆಂದೂ ಗಾಢಾಲಿಂಗನಗೈದು ನಿನ್ನ ಮಗನಾದ ಮೊಲ್ಲೆಬೊಮ್ಮಯ್ಯನೆ ನಿನ್ನಿಂದ ವಂಶ ಉದ್ಧಾರವಾಗಿ ನಿನ್ನ ವಂಶಜರಿಂದ ನನ್ನ ಸೇವಾ

ಚಿರಕಾಲವಿರಬೇಕಾದ ೬(ರಣ)೬ ನೀನು ಮೇಗುಂಡಿರಾಜನ ಮಗಳಾದ ಹಂಪಾದೇವಿಯನ್ನು ಲಗ್ನವಾಗು ಎಂದು ಕೇಳೆಂದು ಹೇಳಲು ಹೇ ಸ್ವಾಮಿ ಗುರುವರ್ಯ ನಾವು ಜಂಗಮರು ಅವರು ರಾಜರು ನಮಗೆ ತಮ್ಮ ಕನ್ಯೆಯನ್ನು ಹ್ಯಾಗೆ ಕೊಟ್ಟಾರುಯೆನಲು ನನ್ನ ಮಿತ್ರನೆ ನಿನ್ನ ಬೆಂಬಲವಾಗಿ ನಾನು ಇರುತ್ತೇನೆ ಹೀಗೆಂದು ಮಾರ್ಗಅಭಯ ಪ್ರಧಾನವ ಗೈಯ್ಯಲು ಆ ಪ್ರಕಾರಕ್ಕೆ ಮೊಲ್ಲೆಬೊಮ್ಮಯ್ಯವಡಿಯರು ಹೋಗಿ ಅರಸನನ್ನು ಕೇಳಲು ಈತನು ಭಿಕ್ಷುಕನು ಇವನನ್ನು ದೂಡಿರೆಂದು ದೂಡಿಸಲು ಪುರವು ಅಗ್ನಿ ಪ್ರವೇಶವಾಗಿ ದಹಿಸುತ್ತಿರಲು ರಾಜನು ಊರ ಜನರು ಗಾಬರಿಗೊಂಡು ಆ ಜಂಗಮನನ್ನು ಕರೆತನ್ನಿರೆಂದು ಹೇಳಿ ಕರಿಸಿ ಸ್ವಾಮಿ ನಿಮಗೆ ಬೇಕಾದ ಹಂಪಾದೇವಿಯರು(ರನ್ನು ಕರೆದೊಯ್ಯಬಹುದು ಎನ್ನಲು ಆ ಪ್ರಕಾರ ಕರೆತಂದು) ಗುರುಕಲ್ಲಿನಾಥರ ಸೇವೆಯಲ್ಲಿ ಸುಖದಿಂದಿರಲು ಗುರುಕಲ್ಲಿನಾಥನು ಮುಂದೆ ಕಲ್ಯಾಣ ಸೂಚನೆ ತಿಳಿದುದರಿಮದ ಮೊಲ್ಲೆಬೊಮ್ಮ ವಡಿಯನು ಪ್ರಿಯ ಪತ್ನಿ ಹಂಪಾದೇವಿ ಗರ್ಭಿಣಿಯಾಗಿ ಗಂಡುಮಗುವನ್ನು ಹಡೆದಳು. ಆತನಿಗೆ ಶ್ರೀ ಕಲ್ಲಿನಾಥನು ಕಲಿದೇವೊಡಿಯನೆಂದು ನಾಮವನಿಟ್ಟರು. ಆ ಮೊಲ್ಲೆಬೊಮ್ಮವಡಿಯನಿಗೆ ಚಾಳಕ್ಯದ ಚೋಲುಬುಪಾಲಕ ಪುತ್ರ ಚಾವುಂಡರಾಯ ಕುಲಿದುಪರು ಯರಬರ (ಗೆ) ಯಂಬತ್ತೊಂದು ಗ್ರಾಮ ನರೇಗಲ್ಲ ಅರವತ್ತು ಮೂರು ಗ್ರಾಮ ಪರಿಪಾಲಿಸುತ್ತಿರಲು ಇವರುಗಳಿಗೆ ಶ್ರೀ ಕಲ್ಲಿನಾಥನು ಅನಂತ ಪವಾಡಗಳನ್ನು ಮಾಡಿ ತೋರಿಸಲು ಅದಕ್ಕೆ ಅರಸರು ಶ್ರೀ ಕಲ್ಲಿನಾಥಸ್ವಾಮಿಗೆ ಅನಂತ ಪವಾಡಗಳನ್ನು ಮಾಡಿ ತೋರಿಸಲು ಅದಕ್ಕೆ ಅರಸರು ಶ್ರೀ ಕಲ್ಲಿನಾಥಸ್ವಾಮಿಗೆ ಈ ಶಿವ ಕಲ್ಪು(ರಕೆ) ಚಿರಕಾಲ ಜಹಗೀರುಯಿರಲೆಂದು ಶಿವಪುತ್ರ ಮೊಲ್ಲೆ ಬೊಮ್ಮಯ್ಯಸ್ವಾಮಿಗಳಿಗೆ ಶಾಸನಬರದುಕೊಟ್ಟು ೧(ಊ)೧ ರಾಚಿನ ೨(ತರುಸೀಮೆ)೨ ತೆಂಕಕೆಗುಡ್ಡ ಹಳ್ಳದಿಂ ಪಡುವಲು ಬಳಗೇರಿಯ ಸೀಮೆಯಂಚಿನ ತುರುಸೀಮೆಯ ಪಡುವಲು ಯರಬರದಯ ಶೀಮೆ ತೆಂಕಲು ಮಧ್ಯದೊಳಗಣ ಮೂಡಣ ಭಾಗ ೩(ದ)೩ ಚಳರಿಕೆಯಂ ತೆಂಕ ಮತ್ತರುಹನ್ನೆರಡು ಯರಬರದಿಯಾ ದಾರಿಯ ಮೂಡಲು ಜಾಲಯಹಳದಿಂ ತೆಂಕಮತ್ತರು ಮಾರುತೆದಿಯಾ ಹಳದಿಂಲು ಮೂಡಲು ಗುಡಗುಂಟಿಯ ದಾರಿಯ ಬಡಗಲು ಮತ್ತರು ಮೂರು ಹಗ್ಗೆಯು ಯಂಬತಗ ಮಾದು ಮತ್ತರು ೧ ಯರಬರದಿಯಾ ಪಡುವಲು ಪುದೋಟ ಮತ್ತರು ಅಂತೂ ೧೨೦ ಮಾ.ಶೂತ್ರ(?)ದೊಳಗೊಂದು ಗುಣಮುಮುಂ ಚಾಳುಕ್ಯ ವಿಕ್ರಮಕಾಲ ವರುಷ ೨೩ ಬಹುಧಾನ್ಯ ನಾಮಸಂವತ್ಸರ ಚೈತ್ರ ಬಹುಳದಮದಾಶ್ಯಾ ಆದಿತ್ಯವಾರ ಸೂರ್ಯಗ್ರಹಣದಂದು ಸರ್ವಮಾನ್ಯವಾಗಿ ಕೊಟ್ಟದ್ದು ಮತ್ತು ತೊಂಡಿಹಾಳ ಪುರದೊಳು ಕೊಂಡದಕಟ್ಟಿ ಹಿರೇಮಠ ಸಹಿತ ಗುರುವಿಗೆ ನಾಲ್ವತ್ತಾರು ಕೂರಿಗೆ ಸರ್ವಮಾನ್ಯವಾಗಿ ಕೊಟ್ಟದ್ದು ಮುಂದೆ ಜಂಗಮಂಪಾಳಿಪರು ಆರು ಕೆಡಿಸಬಾರದೆಂದು ಅನಂತ ಶಾಸನಮಂ ಬರದು ಕೊಟ್ಟಿದ್ದಾರೆ. ಆ ಪ್ರಕಾರಕ್ಕೆ ದ(ಂ)ಪತಿಗಳು ಮೊಲ್ಲೆಬೊಮ್ಮವಡಿಯನು ಹಂಪಾದೇವಿಯ ಪುತ್ರ ಕಲ್ಲೆದೇವೊಡಿಯನಿಗೆವಪ್ಪಿಸಿ ತಾವು ಇಬ್ಬರು ಗುರುಧ್ಯಾನರತನಾಗುತಿರಲಿಕ್ಕೆ ಆ ದಂಪತಿಗಳಿಬ್ಬರಿಗೆ ಗುರುವರ್ಯ ಕಲ್ಲಿನಾಥನು ಪ್ರಸನ್ನನಾಗಿ ನನ್ನ ಮಕ್ಕಳೆ ನಿಮ್ಮ ಪುತ್ರ ಕಲ್ಲೆದೇವೊಡಿಯನಿಗೆವಪ್ಪಿಸಿ ತಾವು ಇಬ್ಬರು ಗುರುಧ್ಯಾನರತನಾಗುತಿರಲಿಕ್ಕೆ ಆ ದಂಪತಿಗಳಿಬ್ಬರಿಗೆ ಗುರುವರ್ಯ ಕಲ್ಲಿನಾಥನು ಪ್ರಸನ್ನವಾಗಿ ನನ್ನ ಮಕ್ಕಳೆ ನಿಮ್ಮ ಪುತ್ರ ಕಲ್ಲೆದೇವೊಡಿಯನಿಗೆ ವಜ್ರಪುರದ ಸಂಗಯ್ಯದೇಸಾಯಿಗಳ ಮಗಳಾದ ಶ್ರೀದೇವಿ ವರದಾನಿಯನ್ನು ಲಗ್ನ ಮಾಡಿರೆಂದು ಹೇಳಲು

ಆ ಪ್ರಕಾರಕ್ಕೆ ಪವಾಡ ಮಾಡಿದ. ಲಗ್ನ ಮಾಡಿದರು ಅನಂತರ ಗುರುವು ಪ್ರತ್ಯಕ್ಷವಾಗಿ ನನ್ನ ಮಗನಾದ ಮೊಲ್ಲೆಬೊಮ್ಮಯ್ಯನ್ನಿಂದಲೂ ಮತ್ತು ಜಗದೇವಯ್ಯನಿಂದಲೂ ಕಲ್ಯಾಣದರಸರು ಜೈರಾಜ ಬಿಜ್ಜಳನನ್ನು ವಧಿಸುವುದಕ್ಕೆ ಹೋಗಬೇಕಾದುದರಿಂದ ಸರ್ವಪ್ರಮಾಥರು ನಿನ್ನ ಮಾರ್ಗವನ್ನೇ ನಿರೀಕ್ಷಿಸುತ್ತಿರುವರು ನೀನು ಹೋಗಬೇಕೆನಲು ಆ ಮೊಲ್ಲೆಬೊಮ್ಮಯ್ಯನು ಗುರುವೆ ನನ್ನ ಮಗನಾದ ಕಲ್ಲೆದೇವನೊಡಿಯನು ನಿಮ್ಮನ್ನೇ ಕೂಡಿರುವನು. ಈತನ ಮೇಲೆ ಕೃಪಾವಿರಲಿ ಪ(ತ್ನಿ)ಯಳಾದ ಹಂಪಾದೇವಿಯಲ್ಲಿ ಕರುಣವಿರಲೆಂದು ಹೇಳಲು ಗುರುವು ಯಾಕಾಗಲೊಲ್ಲದು ನಾನು ಕಾಪಾಡುತ್ತೇನೆಂದು ಪೂರ್ಣ ಅಭಯಪ್ರಧಾನ ಗೈಯಲು ಗುರುವಿಗೆ ನಮಸ್ಕರಿಸಿ ಮಗನಾದ ಕಲ್ಲೆದೇವೊಡಿಯನಿಗೂ ಪತ್ನಿ ಹಂಪಾದೇವಿಗೂ ಇಬ್ಬರಿನ್ನು ಗುರು ಕಲ್ಲಿನಾಥಸ್ವಾಮಿಯ ಪಾದಸೇವೆಯಲ್ಲಿ ಚೆನ್ನಾಗಿರಬೇಕೆಂದು ಹೇಳಿ ಅವರನ್ನು (ಬೀಳ್ಕೊ)ಂಡು ಕಲ್ಯಾಣಕ್ಕೆ ಹೋಗಿ ಜಗದೇವನಿಗೆ ಸಹಾಯವಾಗಿ ಬಿಜ್ಜಳನನ್ನು ವಧಿಸಿ ಶಿವನೊಳು ಕೂಡಿದರು. ಇತ್ತಲಾ ಕಲ್ಲೆದೇಮೊಡಿಯರು ವರದಾನಿದೇವಿಯರು ಸುಖದಿಂದ ಶ್ರೀ ದೇವರ ಸೇವೆಯೊಳಿರುತಿರಲ್ಕೆ ಶ್ರೀ ದೇವಿ ವರದಾನಿಯರು ಗರ್ಭವಾಗಿ ಗಂಡಸುಮಗನನ್ನು ಪಡೆದಳು. ಆ ಕೂಸು ಪರಬ್ರಹ್ಮಸ್ವರೂಪ ಇದ್ದದರಿಂದ ಆ ಕೂಸಿಗೆ ಮೊಲ್ಲೆದೇವೊಡೆಯರೆಂದು ಹೆಸರಿಟ್ಟರು. ಮತ್ತೆ ಕೆಲವುದಿವಸ ಮೇಲೆ ಶ್ರೀ ದೇವಿ ವರದಾನಿಯರು ಗರ್ಭಿಣಿಯಾಗಿ ಅವಳಿಜನ ಪುತ್ರರನ್ನು ಹಡೆದಳು. ಮೊದಲನೆ ಮಗನಾದ ಕಲ್ಲೆವೊಡಿಯನೆಂದು ಎರಡನೆ ಮಗನಿಗೆ ಛಾಯದೇವೊಡಿಯನೆಂದು ಹೆಸರಿಟ್ಟರು. ಆ ಕಲ್ಲೆದೇವೊಡಿಯರ ತಮ್ಮ ಹಿರೇಮಗನಾದ ಮೊಲ್ಲೆದೇವೊಡಿಯರಿಗೆ ಪಟ್ಟಾಧಿಕಾರನು ಕೊಟ್ಟರು. ಆ ಪಟ್ಟವ ಕೊಡುವ ಕಾಲಕ್ಕೆ ಉಜನಿಯಮರುಳಾಧ್ಯರಾದ ಸಿಂಹಾಸನಪತಿಗಳು ಉತ್ಸಾಹದೊಡನೆ ಬಂದು ಒಳ್ಳೆ ವೈಭವದಿಂದ ಮೊಲ್ಲೊದೇವೊಡಿಯರುಗಳನ್ನು ನೋಡಿ ಇವನು ಮಹಾ(ಸಾ)ತ್ವಿಕನಿದ್ದಾನೆಂದು ತಿಳಿದು ಆ⁽(ಚ)⁾ರಪತಿಗಳು ತಮ್ಮ ಹುಕುಮು ಕೊಟ್ಟು ಪಟ್ಟಾಭಿಷೇಕ ಮಾಡಿದರು. ಮತ್ತು ಕಲ್ಲಿದೇವೊಡಿಯರಿಗೆ ಸಂಗಯ್ಯ ದೇಸಾಯಿ ಮಗನಾದ ರುದ್ರಯ್ಯ ದೇಸಾಯಿಯ ಮಕ್ಕಳುಗಳಲ್ಲಿ ಹಿರಿಮಗಳಾದ ಸಂಕಾದೇವಿಯನ್ನೂ ಮತ್ತು ಚಿಕ್ಕಗಳು ವೀರಾದೇವಿಯನ್ನೂ ಛಾಯಾದೇವವಡಿಯರಿಗೆ ಲಗ್ನ ಮಾಡಿದರು. ಅವರಿಬ್ಬರ ಹೆಂಡಿರು ಬಂದನಂತರ ಶಿವಪುತ್ರ ಮಲ್ಲೆವಡಿಯರ ಕುಟುಂಬಳಾದ ಪಂಪಾದೇವಿಯು ಮೇಗುಂಡಿಗೆ ಹೋಗಿ ತನ್ನ ತವರುಮನಿಯಲ್ಲಿದ್ದ ದ್ರವ್ಯವನ್ನು ಒಂಬತ್ತು ಕೊಪ್ಪರಿಗೆಯನ್ನು ಆನೆ ಒಂಟಿ ಇವುಗಳ ಮೇಲೆ ಹೇರಿಸಿಕೊಂಡು ಬಂದು ಶಿವಕಲ್ಪುರದಲ್ಲಿರುವ ತನ್ನ ಮೊಮ್ಮಗನಾದ ಮೊಲ್ಲೆವೊಡಿಯ ಪಟ್ಟಾಧಿಕಾರಿಯ ಸ್ವಾದೀನ ಮಾಡಿದಳು. ಆಗ್ಗೆ ಅಧಿಕಾರಿಗಳು ಅದೆ ಕೊಂಡದಕಟ್ಟಿ ಹಳೆಯ ಮಠದ ಚವಕಿಯಲ್ಲಿ ಮೆಲೆ ಮಣ್ಣು ಕೋಟಿ, ಅದರೊಳಗೆ ಕಲ್ಲುಕೋಟಿ, ಅದರೊಳಗೆ ಗಚ್ಚಿನಕೋಟೆ, ಅದರೊಳಗೆ ನೆಲ ಬರತಿ ಮಣ್ಣು ತುಂಬಿಸಿರುವುದು. ಅದರ ಕೆಳಗೆ ಕಲ್ಲಿನ ಮಡಿಗಿ, ಇಟ್ಟಗಿ ಕಲ್ಲಿನ ಗಚ್ಚಿನ ಗೋಡಿಯು ಇರವವು-ಇಟ್ಟಂಗಿ ಗಚ್ಚಿನ ಗೋಡಿಗೆ ಪಂಚಲೋಹದ ತಗಡುಬಡಿಸಿರುವುದು ನೆಲ ಬವರದ್ದು ಮೂರು ಅಂಕಣ ಚವಕಿಯೊಳಗೆ ಮೂರು ಗೇಣು ಉದ್ದ, ಮೂರು ಗೇಣು ಅಗಲ ಇಂಥ ಒಂಬತ್ತು ಕೊಪ್ಪರಿಗಿಗಳ ಮೂರು ಹಾರಿ ನಡ ಹಾಕಿ, ಮೂರು ಹಾರಿ ⁽ಅಡ್ಡ⁾ ಹಾಕಿ ಬಿಳೆದು(?) ಸರಪಳಿ ನೆಲವಿನಲ್ಲಿ ತೂಗುಹಾಕಿರುವವು. ಈ ಒಂಬತ್ತು ಕೊಪ್ಪರಿಗೆ ದ್ರವ್ಯವನ್ನು ಕಾಯಲಿಕ್ಕೆ ಏಳು ಮಕ್ಕಳ ಕೊರವಿ ಮತ್ತು ಏಳು ಹೆಡಿ ನಾಗೇಂದ್ರನ ಕಾವಲಿಟ್ಟಿರುವುದು. ಇವರಿಗೆ ಬಲಿ

ಕೊಡುವ ಜೀನಸುಗಳ ವಿವರ. ಒಂಬತ್ತುಗಿದ್ನಾಯೆಳ್ಳು ಚಿಂಗಾಳಿ, ಐದು ಗಿದ್ನ ಕಡಲಿವುಂಡಿ ಒಂದು ಗಿದ್ನಾ ನೆನಗಡಲಿ, ಹನ್ನೆರಡು ಗಿದ್ನ, ಕರಿಗಡಬು, ಐದು ಕಕೊಡ ತುಪ್ಪ, ನೂರಾ ಎಂಬತ್ತು ಕಬ್ಬಿನಗಳಾ, ಐದುಕೊಡ ಹಾಲು ಆರು ಗಿದ್ನ ಅಕ್ಕಿ ಬೋನ, ಹನ್ನೆರಡು ರೂಪಾಯಿ ಸೀರಿ ಒಂದು ರೂಪಾಯಿ ಕುಪ್ಪಸ, ಆ ಕೊಂಡದ ಕೋಟಿ ರಕ್ಷಣದಲ್ಲಿ ಕಲ್ಲಿನಾಥನ ಕಡಿಗೆ ಮುಖ ಗುರುಮಠದ ಚವಕ್ಕೆ(?) ಜೆಡ್ಡಿಬಾಗಿಲು ತೆಗೆದು ಒಳಿಯಕ್ಕೆ ಹೋಗಿ ಪಂಪಾಮುಖಿಗೆ ಹಾಗೂ ಪಟ್ಟಾಧಿಕಾರಿಗಳಗೆ ಗದ್ದಿಗೂ ನಮಸ್ಕಾರ ಮಾಡಿ ಆ ದ್ರವ್ಯ ತೆಗೆದುಕೊಂಬುದಕ್ಕೆ ಹರಕತ್ತುಯಿಲ್ಲ.

* * *

# ಗ್ರಂಥಋಣ


೧. **ಅದೃಶ್ಯ ಕವಿಯ ಜೀವನ ಮತ್ತು ಕೃತಿಗಳು,** ಡಾ.ರಾಜೇಂದ್ರ ಅಣ್ಣಾನವರ ದಾಂಗುಡಿ ಪ್ರಕಾಶನ ದಾಂಗುಡಿ ಮಹಾಂತೇಶ ನಗರ ರಾಮದುರ್ಗ, ೨೦೦೦.

೨. **ಆಧುನಿಕ ಬರಹಗಾರರು,** ಪ್ರ.ಸಂ.ಜಿ.ಎಸ್.ಭಟ್ಟ, ಪಿ.ಲಂಕೇಶ ಡಾ.ಬಿ.ವಿವಸಂತಕುಮಾರ ಚೌತನ ಪ್ರಿಂಟರ್‍ಸ ಮತ್ತು ಪಬ್ಲಿಷರ್‍ಸ ಮೈಸೂರು, ೧೯೫೩.

೩. **ಕರ್ನಾಟಕದ ನಾಥಪಂಥ,** ಡಾ.ರಹಮತ್ ತರಿಕೇರಿ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೬.

೪. **ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ.** ಸಂ. ಡಾ.ಕೆ.ಎಂ.ಸುರೇಶ, ವಾಸುದೇವ ಬಡೀಗೆರ, ಡಾ.ಎಸ್.ವೈ.ಸೋಮಶೇಖರ ಮಾಡಲಗೇರಿ ಕೊಟ್ರೇಶ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧.

೫. **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಡಾ.ಎಚ್.ತಿಪ್ಪೇರುದ್ರ ಸ್ವಾಮಿ ಡಿ.ವಿ.ಕೆ.ಮೂರ್ತಿ, ಪ್ರ ಮೈಸೂರು, ೨೦೦೭.

೬. **ಕಲ್ಲೂರು ಶ್ರೀಕಲ್ಲಿನಾಥೇಶ್ವರ,** (ಸಂ) ಡಾ.ಬಿ.ವ್ಹಿ.ಶಿರೂರು ಶ್ರೀ ಕಲ್ಲಿನಾಥೇಶ್ವರ ಟ್ರಸ್ಟ್ ಕಮಿಟಿ, ಕಲ್ಲೂರು, ೨೦೦೬.

೭. **ಕರ್ನಾಟಕ ಚರಿತ್ರೆ–೨**(ಕ್ರಿ.ಶ.೬೪೦–೧೩೩೬), ಪ್ರೊ.ಬಿ.ಪೇಕ್ ಅಲಿ. ಕನ್ನಡ ವಿಶ್ವವಿದ್ಯಾಲಯ,ಹಂಪಿ, ೧೯೯೭.

೮. **ಕನ್ನಡ ಸಾಹಿತ್ಯ ಕೋಶ,** (ಸಂ) ರಾಜಪ್ಪ ದಳವಾಯಿ ಶ್ರೀರಾಘವೇಂದ್ರ ಪ್ರ. ಸಂಖ್ಯೆ–೯ ದಿವಾನಖಾನಗಲ್ಲಿ, ಚಿಕ್ಕಪೇಟೆ ಬೆಂಗಳೂರು –೨೦೦೬.

೯. **ಕನ್ನಡ ಹಸ್ತಪ್ರತಿ ಸೂಚಿ ಸಂಪುಟ.೨,** (ಸಂ) ಡಾ.ಡಸ್.ಟಿ.ಹಳ್ಳಿಕೇರಿ ಡಾ.ಕೆ.ರವೀಂದ್ರನಾಥ ಪ್ರ ಕ.ವಿ.ವಿ.ಹಂಪಿ,೨೦೦೭.

೧೦. **ಗುಂಡ ಬ್ರಹ್ಮಯ್ಯಗಳ ಸಾಹಿತ್ಯ** ಡಾ.ಕೆ.ರವೀಂದ್ರನಾಥ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೬.

೧೧. **ತಲೆದಂಡ (ನಾಟಕ),** ಗಿರೀಶ ಕಾರ್ನಾಡ ಮನೋಹರ ಗ್ರಂಥ ಮಾಲೆ ಧಾರವಾಡ–೨೦೦೭.

೧೨. **ಧರ್ಮಭಂಡಾರಿ ಬಸವಣ್ಣನವರು,** ಪ್ರೊ.ಬಸವರಾಜ ಚೆನ್ನ ವೀರಪ್ಪ ಜವಳಿ ಎಮ್. ಎ ಕರ್ನಾಟಕ ಕಾಲೇಜ್, ಧಾರವಾಡ–೨೦.೧೨.೧೯೬೩.

೧೩. **ಪ್ರಸನ್ನ ಶಂಕರಲಿಂಗ ರಗಳೆಗಳು,** ಧೂಪದ ಮಂಚಣ್ಣನ ರಗಳೆ, ಡಾ.ಎಸ್.ಸುಂಕಾಪುರ ೧೯೭೬.
೧೪. **ಪದ್ಮರಾಜ ಪುರಾಣ ಪದ್ಮಣಾಂಕ ಕವಿಕೃತ** (ಸಂ) ಡಾ.ಆರ್.ಸಿ.ಹಿರೇಮಠ ಮುರುಘಾಮಠ ಧಾರವಾಡ-೧೯೫೮.
೧೫. **ಪಾಶುಪತ ದರ್ಶನ,** ಲೇ. ಎಸ್.ಎಸ್.ಹಿರೇಮಠ ; ಸಮತಾ ಪ್ರಕಾಶನ, ಹರಪನಹಳ್ಳಿ ೨೦೦೩.
೧೬. **ಬಸವಪುರಾಣ ಪರಂಪರೆ (ಬಸವ ಮಾರ್ಗ-೮),** (ಸಂ) ಡಾ.ವೀರಣ್ಣ ರಾಜೂರು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೪.
೧೭. **ಬಸವೇಶ್ವರರ ಸಮಕಾಲೀನರು,** ಬಸವ ಸಮಿತಿ, ಬೆಂಗಳೂರು-೧೯೬೮.
೧೮. **Basavesvara and his times,** Dr.P.B.DESAI, Kannada Reserch institute Karnatak University Dharwad-೧೯೬೮.
೧೯. **ಭಾವ ಭಿತ್ತಲೆಯ ಭೋಜಪ್ಪ ದೇಸಾಯಿ (ಜೀವನ ಚಿತ್ರ),** (ಸಂ) ಸಿದ್ಧರಾಮ ಉಪ್ಪಿನ, ಬಸವರಾಜ ದೇಸಾಯಿ ರಂಗ ಪರಿಕರ ಪ್ರಕಾಶನ, ಶಹಾಪುರ ಜಿಲ್ಲೆ ಕಲಬಂರಗಿ-೨೦೦೦.
೨೦. **ಬಿಜಾಪುರ ಜಿಲ್ಲೆಯ ದೇಶಗತಿ ಮನೆತನಗಳು,** ಡಾ.ವಿಜಯಕುಮಾರ ಸಿಗ್ಗಾದರ ಪಿ.ಎಚ್.ಡಿ. ಪ್ರಬಂಧ-೨೦೦೭.
೨೧. **ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಭಾಗ-೧,** (ಸಂ) ಆರ್.ಸಿ.ಹಿರೇಮಠ ಎಸ್.ಎಸ್.ಸುಂಕಾಪುರ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೨೨. **ಮಾರ್ಗ-೪,** ಎಂ.ಎಂ.ಕಲಬುರ್ಗಿ ಸ್ವಪ್ನ ಬುಕ್ ಹೌಸ -೨೦೦೭.
೨೩. **ಲಿಂಗ ಪುರಾಣಂ,** ಗುರುಲಿಂಗದೇಶಕ ವಿರಚಿತ (ಸಂ) ಜಿ.ಜಿ.ಮಂಜುನಾಥ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ೧೯೯೭.
೨೪. **ವರ್ಣದಿಂದ ವರ್ಗದ ಕಡೆಗೆ,** (ಸಂ) ಆರ್.ವಿ.ಭಂಡಾರಿ ಕನ್ನಡ ಪುಸ್ತಕ ಪ್ರಾಧಿಕಾರ ಚಾಮರಾಜಪೇಟೆ, ಬೆಂಗಳೂರು-೨೦೦೩.
೨೫. **ವಚನ ಸಾಹಿತ್ಯ** (ಸಂ) ವಿ.ಚಂದ್ರಶೇಖರ ನಂಗಲಿ ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು-೨೦೦೫.
೨೬. **ವೃಷಭಲಿಂಗೇಶ್ವರ ಪುರಾಣ,** ಪ್ರ. ಸಂಗನಬಸವ ಶಿವಯೋಗಿಗಳೂ ಬಂಧನಾಳ -೧೯೫೨.
೨೭. **ಶಿವಶರಣ ಕಥಾರತ್ನ ಕೋಶ,** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ-ಮೈಸೂರು (ಸಂ) ತ.ಸು.ಶಾಮರಾಯ -೨೦೦೩.
೨೮. **ಶ್ರೀ ಬಸವೇಶ್ವರ ಚರಿತಾಮೃತ,** ವೀರಶೈವ ಭಕ್ತಿ ವಿಜಯ ಗ್ರಂ. ಬಸವಯ್ಯ ಶಾಸ್ತ್ರಿಗಳು ಹಿರೇಮಠ ಪ್ರ. ಮೆ.ಪಿ.ಸಿ.ಶಾಬಾದಿಮಠ ಬುಕ್ ಡಿಪೋ, ಗದಗ - ೨೦೦೪.
೨೯. **ಶ್ರೀ ಬಸವಪುರಾಣ,** ಕಂಚಿ ಶಂಕರಾರಾಧ್ಯ ವಿರಚಿತ (ಸಂ) (ಸಂಸ್ಕೃತ ಪದ್ಯ ಮತ್ತು ಕನ್ನಡ ಅನುವಾದ) ಡಾ.ಮಲ್ಲಿಕಾರ್ಜುನ ರೆಡ್ಡಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮೇ-೧೯೯೩.
೩೦. **ಸಂಶೋಧನಚತುರ್ಮುಖ,** ಡಾ.ಬಿ.ವ್ಹಿ.ಶಿರೂರು ವಿದ್ಯಾನಿಧಿ, ಪ್ರಕಾಶನ - ೨೦೦೬.
೩೧. **ಸಾಹಿತ್ಯ ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ,** ಡಾ.ಅರವಿಂದ ಮಾಲಗತ್ತಿ ಕೆ.ಸಾ.ಪ. ಬೆಂಗಳೂರು-೨೦೦೩.

೩೨. **ಸಾನಂದ ಚರಿತೆ,** ಕುಮಾರ ಪದ್ಮರಸ ವಿರಚಿತ (ಸಂ) ಎಸ್.ಬಸಪ್ಪ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೫.

೩೩. **ಸಿದ್ಧ ಶ್ರೀ,** ಯಲಬುರ್ಗಿ ಶ್ರೀ ಸಂಸ್ಥಾನ ಹಿರೇಮಠದ ಶ್ರೀ ಸಿದ್ದರಾಮೇಶ್ವರದೇವರ ಪೀಠಾರೋಹಣ ಸಂಸ್ಕರಣ ಸಂಚಿಕೆ ಸಂ. ಡಾ.ವಿ.ವ್ಹಿ.ಶಿರೂರ ಶ್ರೀ ಸಿದ್ಧರಾಮೇಶ್ವರ ಪ್ರಕಾಶನ ತಾ.ಯಲಬುರ್ಗಿ ಜಿ.ಕೊಪ್ಪಳ–೨೦೦೦.

೩೪. **History of Karnataka,** I Rebellow, PRAKASHA SAHITYA – ೧೯೮೨.

೩೫. **ಹಲಗೆಯಾರ್ಯನ ಶೂನ್ಯ ಸಂಪಾದನೆ,** (ಸಂ) ಎಸ್.ವಿದ್ಯಾಶಂಕರ ಜಿ.ಎಸ್.ಸಿದ್ಧಲಿಂಗಯ್ಯಾ ಸ್ನೇಹಾ ಪ್ರಿಂಟರ್ಸ್, ಬೆಂಗಳೂರು–೧೧೯೮.

* * *



**ಕಂಬದ ಮೇಲಿರುವ ವಿಶಿಷ್ಟ ಚಿತ್ರಗಳು**



**ಪ್ರಾಣಿವೇಷದ ಜಂಗಮನ ರೂಪ**



ಗಡ್ಡಧಾರಿ ಜಂಗಮನ ಚಿತ್ರ



ಆತ್ಮಲಿಂಗ ಹಿಡಿದ ಸ್ತ್ರೀ


ಗಂಡಭೇರುಂಡ


ಉಗ್ರ ನರಸಿಂಹ



ಪಂಚಲಿಂಗ



ಗಜಾನನ



ಜಗದೇವ ಮೊಲ್ಲೆಬೊಮ್ಮಯ್ಯರು



ಎಳಹೂಟೆ ಪ್ರಸಂಗ

